# "ಡಿ.ಕೆ. ಚೌಟರ 'ಮಿತ್ತಬೈಲ್ ಯಮುನಕ್ಕ' ಕಾದಂಬರಿಯಲ್ಲಿ ಗುತ್ತು ಸಂಸ್ಕೃತಿಯ ಪ್ರತಿನಿಧೀಕರಣ"

ಹಂಪಿ ಕನ್ನಡ ವಿಶ್ವವಿದ್ಯಾಲಯದ ಭಾಷಾ ನಿಕಾಯದಿಂದ ಎಂ.ಫಿಲ್. ಪದವಿಗಾಗಿ
ಸಾದರಪಡಿಸಿದ ಸಂಪ್ರಬಂಧ

ಸಂಶೋಧಕರು
ರಮೇಶ ಬಿ.



ಮಾರ್ಗದರ್ಶಕರು
ಡಾ। ಗಿರೀಶ್ ಭಟ್ ಎ.

೨೦೧೨

ಕರ್ನಾಟಕ ತಿಯೊಲಾಜಿಕಲ್ ಸಂಶೋಧನಾ ಕೇಂದ್ರ
ಬಲ್ಮಠ, ಮಂಗಳೂರು - ೫೭೫ ೦೦೧

# "ಡಿ.ಕೆ. ಚೌಟರ 'ಮಿತ್ತಬೈಲ್ ಯಮುನಕ್ಕ' ಕಾದಂಬರಿಯಲ್ಲಿ ಗುತ್ತು ಸಂಸ್ಕೃತಿಯ ಪ್ರತಿನಿಧೀಕರಣ"

ಹಂಪಿ ಕನ್ನಡ ವಿಶ್ವವಿದ್ಯಾಲಯದ ಭಾಷಾ ನಿಕಾಯದಿಂದ ಎಂ.ಫಿಲ್. ಪದವಿಗಾಗಿ
ಸಾದರಪಡಿಸಿದ ಸಂಪ್ರಬಂಧ

ಸಂಶೋಧಕರು

**ರಮೇಶ ಬಿ.**

KTS MKS 00547

ಮಾರ್ಗದರ್ಶಕರು

**ಡಾ। ಗಿರೀಶ್ ಭಟ್ ಎ.**

೨೦೧೨

**ಕರ್ನಾಟಕ ತಿಯೊಲಾಜಿಕಲ್ ಸಂಶೋಧನಾ ಕೇಂದ್ರ**

ಬಲ್ಮಠ, ಮಂಗಳೂರು – ೫೭೫ ೦೦೧

# ಯೋಗ್ಯತಾ ಪತ್ರ

**ಶ್ರೀ ರಮೇಶ ಬಿ.** ಅವರು ನನ್ನ ಸಲಹೆ ಮತ್ತು ಮಾರ್ಗದರ್ಶನದಲ್ಲಿ **"ಡಿ.ಕೆ. ಚೌಟರ 'ಮಿತ್ತಬೈಲ್ ಯಮುನಕ್ಕ' ಕಾದಂಬರಿಯಲ್ಲಿ ಗುತ್ತು ಸಂಸ್ಕೃತಿಯ ಪ್ರತಿನಿಧೀಕರಣ"** ಎಂಬ ಶೀರ್ಷಿಕೆಯ ಈ ಸಂಪ್ರಬಂಧವನ್ನು **ಎಂ.ಫಿಲ್. ಪದವಿ** ಪ್ರಾಪ್ತಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯದಲ್ಲಿ ಸಲ್ಲಿಸಬೇಕೆಂದು ಸಿದ್ಧಪಡಿಸಿದ್ದಾರೆ. ಈ ಸಂಪ್ರಬಂಧವು ಸಂಶೋಧಕರ ಸ್ವಂತ ಪರಿಶ್ರಮ, ಅಭಿಪ್ರಾಯ, ಸಂಗ್ರಹಬೋಧನೆ ಮತ್ತು ಸಂಶೋಧನೆಯ ಫಲಸ್ವರೂಪವಾಗಿದೆ. ಇವರು ಸಂಪ್ರಬಂಧದ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಲಿ ಅಥವಾ ಇನ್ನಿತರ ಉದ್ದೇಶಗಳಿಗಾಗಿಯಾಗಲಿ ಬಳಸಿಕೊಂಡಿಲ್ಲ.

ದಿನಾಂಕ: 25-06-2012

**ಡಾ। ಗಿರೀಶ್ ಭಟ್ ಎ.**
ಸಂಶೋಧನಾ ಮಾರ್ಗದರ್ಶಕರು
ಕರ್ನಾಟಕ ಥಿಯೊಲಾಜಿಕಲ್ ಸಂಶೋಧನಾ ಕೇಂದ್ರ
ಬಲ್ಮಠ, ಮಂಗಳೂರು.

# ಪ್ರಮಾಣ ಪತ್ರ

ಹಂಪಿ ಕನ್ನಡ ವಿಶ್ವವಿದ್ಯಾಲಯದ **ಎಂ.ಫಿಲ್.** ಪದವಿಗಾಗಿ ಸಾದರ ಪಡಿಸಿದ **"ಡಿ.ಕೆ. ಚೌಟರ 'ಮಿತ್ತಬೈಲ್ ಯಮುನಕ್ಕ' ಕಾದಂಬರಿಯಲ್ಲಿ ಗುತ್ತು ಸಂಸ್ಕೃತಿಯ ಪ್ರತಿನಿಧೀಕರಣ"** ಎಂಬ ಶೀರ್ಷಿಕೆಯ ಈ ಸಂಪ್ರಬಂಧವು ನನ್ನ ಸ್ವತಂತ್ರ ಕೃತಿಯಾಗಿದ್ದು, ವಿಶ್ಲೇಷಣೆ ಮತ್ತು ಅಧ್ಯಯನದ ಫಲೋದಯವಾಗಿದೆ. ಮಂಗಳೂರಿನ ಕರ್ನಾಟಕ ತಿಯೊಲೊಜಿಕಲ್ ಸಂಶೋಧನಾ ಕೇಂದ್ರದಲ್ಲಿ ಸಂಶೋಧನಾ ಮಾರ್ಗದರ್ಶಕರಾದ **ಡಾ। ಗಿರೀಶ್ ಭಟ್ ಎ.** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ ಈ ಸಂಪ್ರಬಂಧವನ್ನು ಬೇರಾವುದೇ ಪದವಿ, ಡಿಪ್ಲೋಮಾ ಅಥವಾ ತತ್ಸಮಾನ ಉಪಾಧಿಗಳ ಪ್ರಾಪ್ತಿಗಾಗಿ ಅಥವಾ ಆರ್ಥಿಕ ಲಾಭಕ್ಕಾಗಿ ಇಡಿಯಾಗಿ ಅಥವಾ ಬಿಡಿಯಾಗಿ ಬಳಸಿಕೊಂಡಿಲ್ಲವೆಂದು ನಾನು ಈ ಮೂಲಕ ದೃಢಪಡಿಸುತ್ತೇನೆ.

ದಿನಾಂಕ: 26 -06-2012

**ರಮೇಶ ಬಿ.**
ಸಂಶೋಧಕರು
ಕರ್ನಾಟಕ ತಿಯೊಲಾಜಿಕಲ್ ಸಂಶೋಧನಾ ಕೇಂದ್ರ
ಬಲ್ಮಠ, ಮಂಗಳೂರು.

# ಪರಿವಿಡಿ

# ಅಧ್ಯಾಯ – ೧

## ಪ್ರಸ್ತಾವನೆ

ಇತ್ತೀಚಿನ ಕಾಲಘಟ್ಟದಲ್ಲಿ ಸಂಸ್ಕೃತಿ ಕುರಿತ ಅಧ್ಯಯನಗಳು ಹೆಚ್ಚು ಪ್ರಾಮುಖ್ಯತೆಯನ್ನು ಪಡೆಯುತ್ತಿದೆ. ಬೇರೆ ಬೇರೆ ಜನಾಂಗ, ಅವರ ಭಾಷೆ, ಆಚಾರ, ವಿಚಾರ, ಜೀವನಕ್ರಮ ಇವುಗಳಿಗೆ ಸಂಬಂಧಿಸಿದಂತೆ ಸಾಂಸ್ಕೃತಿಕ ಅನನ್ಯತೆಯತ್ತ ಗಮನ ಹರಿಸಿ, ಅದನ್ನು ಗುರುತಿಸುವ ಪ್ರಯತ್ನ ಹೆಚ್ಚಿನ ಪ್ರಮಾಣದಲ್ಲಿ ಮಾಡಲಾಗುತ್ತಿದೆ. ಇಂಗ್ಲೀಷ್‌ನ culture ಎನ್ನುವ ಪದಕ್ಕೆ ಸರಿಸಾಟಿಯಾಗಿ ಬಂದಿರುವ 'ಸಂಸ್ಕೃತಿ' ಎನ್ನುವ ಪದವು ಇಂದು ಹೆಚ್ಚಿನ ಬೌದ್ಧಿಕ ಚರ್ಚೆಗಳಲ್ಲಿ ಕೇಳಿಬರುತ್ತಿದೆ. ಸಂಸ್ಕೃತಿಯು ಒಂದು ಸಮುದಾಯದ ಸಮಗ್ರ ಜೀವನ ವಿಧಾನಗಳ ಮೊತ್ತ. ಅಲ್ಲಿ ಆ ಸಂಸ್ಕೃತಿಯೆನ್ನುವುದು ಅನಾವರಣಗೊಳ್ಳಲು ಸಾಧ್ಯ ಅನ್ನುವುದಾದರೆ 'ಸಂಸ್ಕೃತಿ' ಎನ್ನುವುದು ಪ್ರಾಚೀನವಾದುದು. ಹಿರಿಯ ಪೀಳಿಗೆಯಿಂದ ಉಳಿದುಕೊಂಡು ಬಂದುದು ಎನ್ನುವ ಅಂಶವು ಇಲ್ಲಿ ಮನದಟ್ಟಾಗುವುದು. ಆಧುನೀಕರಣದ ಪ್ರಭಾವದಿಂದ ಸಂಸ್ಕೃತಿಯು ನಾಶಗೊಳ್ಳುತ್ತಿದೆ. ಇದರಿಂದಾಗಿ ಕೆಲವಾರು ವಿಷಯಗಳನ್ನು ಇಂದು ಕೇವಲ ಓದಿಯೆ ತಿಳಿದುಕೊಳ್ಳಬೇಕಾದ ಸಂದರ್ಭ ಬಂದುಬಿಟ್ಟಿದೆ. ಹೀಗಿರುವಾಗ ಆ ಸಂಸ್ಕೃತಿಯ ಕೆಲವು ಭಾಗವನ್ನಾದರೂ ಮುಂದಿನ ಪೀಳಿಗೆಗೆ ತಿಳಿಸಿಕೊಡುವುದು ಅವಶ್ಯವೆನಿಸುತ್ತದೆ. ನಾಗರಿಕ ಸಮಾಜದಿಂದ ದೂರದಲ್ಲಿರುವ ಈ ಅಮೂಲ್ಯ ಸಂಪತ್ತು, ಆಧುನಿಕ ಜನಾಂಗಕ್ಕೆ ವಿಶಿಷ್ಟವೆನಿಸಿದರೂ ಅದರ ತತ್ವಗಳು ಒಂದು ಸಮಷ್ಟಿಯನ್ನು, ಸಹಬಾಳ್ವೆಯನ್ನು ಒದಗಿಸಿಕೊಡುತ್ತದೆ. ಒಂದು ಜೀವನಕ್ರಮವಾಗಿ, ಮೌಲ್ಯಪ್ರಜ್ಞೆಯಾಗಿ, ಕಲಾ ಚಟುವಟಿಕೆಯಾಗಿ ಬಂದಿರುವ ಸಂಸ್ಕೃತಿಯು ಆಧುನೀಕರಣದ ಪ್ರವಾಹದಲ್ಲಿ ಕೊಚ್ಚಿಹೋಗುತ್ತಿದೆ. ಅಂತಹವುಗಳ ಕುರುಹುಗಳನ್ನು ಮುಂದಿನ ಜನಾಂಗಕ್ಕೆ ತಿಳಿಸುವುದು ಅನಿವಾರ್ಯವು ಹೌದು.

ಆಧುನೀಕರಣವು ಬದುಕಿನ ಎಲ್ಲಾ ಅಂಶಗಳನ್ನು ಪ್ರಭಾವಿಸುತ್ತದೆ. ಹೀಗಾಗಿ ಆಧುನೀಕರಣವನ್ನು ಸಾರಾಸಗಟಾಗಿ ನಿರಾಕರಿಸುವವರೂ ಇದ್ದಾರೆ. ಅದೇ ರೀತಿ ಆಧುನಿಕತೆಯೇ ನಮ್ಮೆಲ್ಲಾ ಸಮಸ್ಯೆಗಳಿಗೂ ಪರಿಹಾರ ಎಂದು ವಾದಿಸುವವರೂ ಇದ್ದಾರೆ. ಅದೇನಿದ್ದರೂ ಆಧುನಿಕ ಜಗತ್ತಿನಲ್ಲಿ ಮಾನವ ಸಂಬಂಧಗಳೇ ಶಿಥಿಲಗೊಳ್ಳುತ್ತಿದೆ ಎಂಬುದನ್ನು ಎಲ್ಲರೂ ಒಪ್ಪುತ್ತಾರೆ. ಹೀಗಾಗಿ ಪಾರಂಪರಿಕ ಬದುಕು ಹಾಗೂ ಆಧುನಿಕತೆಯ ನಡುವಿನ ಮುಖಾಮುಖಿಯ ಬಗೆಗಿನ ಅಧ್ಯಯನ ನಡೆಯಬೇಕಾದ ಅಗತ್ಯವಿದೆ.

ಈ ನಿಟ್ಟಿನಲ್ಲಿ ಪಾರಂಪರಿಕ ಚಿತ್ರಣವನ್ನು ಕಲ್ಪಿಸಿಕೊಂಡಾಗ ತುಳುನಾಡಿನಲ್ಲಿ ತುಂಬಾ ಪ್ರಾಮುಖ್ಯತೆಯನ್ನು, ಗೌರವವನ್ನು ಪಡೆದ ಬಂಟ ಸಮಾಜದ 'ಗುತ್ತು' ವಿಶೇಷವಾಗಿ ಗೋಚರಿಸುತ್ತದೆ.

'ಗುತ್ತು' ಎನ್ನುವುದು ಕೂಡಾ ಸಂಸ್ಕೃತಿಯ ಒಂದು ಭಾಗ. ಇಲ್ಲಿ ಬದುಕಿನ ಅನೇಕ ವಿವರಗಳು ಲಭಿಸುತ್ತವೆ. ವ್ಯಕ್ತಿ ವ್ಯಕ್ತಿಯ ಸಂಬಂಧ, ವ್ಯಕ್ತಿ ಸಮಾಜದ ಸಂಬಂಧ ಮತ್ತು ಸಮಾಜ ಸಮಾಜದ ಸಂಬಂಧ ಹೇಗಿರಬೇಕೆಂದು ತಿಳಿದುಕೊಳ್ಳುವುದು ಅತೀ ಮುಖ್ಯ. ಅಂತಹ ಪ್ರಾಮುಖ್ಯತೆಯ ವಿಷಯವನ್ನು ನಮಗೆ ಸಂಸ್ಕೃತಿ ತಿಳಿಸಿಕೊಡುತ್ತದೆ. ಗುತ್ತಿನ ಚಿತ್ರಣವನ್ನು ಕಲ್ಪಿಸಿಕೊಂಡಾಗ ಅದೊಂದು ಬಹುಮುಖಿ ವ್ಯಕ್ತಿತ್ವಗಳಿಂದ ಕೂಡಿರುವ ಒಂದು ಸಮೂಹ. ಬಹುಮುಖಿ ವ್ಯಕ್ತಿತ್ವಗಳಿಂದ ಕೂಡಿದ ಪರಿಣಾಮವಾಗಿ ಅಲ್ಲಿ ಯಾವುದೇ ಭಿನ್ನಾಭಿಪ್ರಾಯಗಳು ಬರುವುದು ಸ್ವಾಭಾವಿಕ. ಅಂತಹ ಸಮಸ್ಯೆಗಳನ್ನು ಶಾಂತ ರೀತಿಯಲ್ಲಿ ಬಗೆಹರಿಸುವುದು ಸಂಸ್ಕೃತಿಯ ಗುಣ. 'ಗುತ್ತು' ಈ ರೀತಿಯ ಚಿತ್ರಣದಿಂದ ಕೂಡಿದ ಏಕತೆಯ ಕೇಂದ್ರ. ಇಲ್ಲಿ ಉಂಟಾಗಿರುವ ಯಾವುದೇ ಸಮಸ್ಯೆಯು ಸಂಸ್ಕೃತಿಯ ನಾಶವನ್ನು ಮಾಡಲಾರದು, ಬದಲಾಗಿ ಇನ್ನಷ್ಟು ಶಕ್ತಿಶಾಲಿಯಾಗಿ ರೂಪುಗೊಳ್ಳುವಂತೆ ಪ್ರೇರೇಪಿಸುತ್ತದೆ.

ಗುತ್ತನ್ನು ಒಂದು ಸಂಸ್ಕೃತಿಯೆಂದು ರೂಪಿಸಿಕೊಂಡಾಗ ಸಮಾಜದ ಎಲ್ಲಾ ಚಿತ್ರಣಗಳು 'ಗುತ್ತು' ಎನ್ನುವುದರಲ್ಲಿ ಅಡಕವಾಗಿರಬೇಕು. ವಾಸ್ತವವಾಗಿ ತುಳುನಾಡಿನಲ್ಲಿ ಕಾಣಸಿಕೊಳ್ಳುವ 'ಗುತ್ತು' ಎನ್ನುವುದರಲ್ಲಿ ಸಮಾಜದ ಎಲ್ಲಾ ಚಿತ್ರಣಗಳು ಅಡಕವಾಗಿದೆ. ಸಮಾಜದ ಒಳ್ಳೆಯ ಗುಣಗಳು ಮಾತ್ರವಲ್ಲ ಕೆಟ್ಟಗುಣಗಳು ಸೇರಿಕೊಂಡು ಗುತ್ತು ಎನ್ನುವುದು ಒಂದು ಪರಿಪೂರ್ಣ ವ್ಯವಸ್ಥೆಯಾಗಿದೆ. ಒಳಿತು ಕೆಡುಕುಗಳು ಸೇರಿಕೊಂಡಾಗ ಮಾತ್ರ ಒಳ್ಳೆಯದರ ಬೆಲೆ ಅರಿವಾಗುವುದು. ಹಾಗೆಯೇ ಗುತ್ತು ಸಂಸ್ಕೃತಿಯಲ್ಲಿ ಈ ರೀತಿಯ ಚಿತ್ರಣಗಳು ಸೇರಿಕೊಂಡಿವೆ. ಅದರ ಮೂಲಕ ನಿಜವಾದ ಸಂಸ್ಕೃತಿಯೆಂದರೇನು ಎನ್ನುವ ಸತ್ಯ ತಿಳಿದು ಬರುತ್ತದೆ, ಗುತ್ತು ಸಂಸ್ಕೃತಿಯ ಮಹತ್ವದ ಅರಿವಾಗುತ್ತದೆ. ಇಂದು ಅಧಿಕಾರ, ಆರ್ಥಿಕ ಸಾಮರ್ಥ್ಯವನ್ನು ಕಳೆದುಕೊಂಡಿರುವ ಗುತ್ತು ಹಿಂದೆ ಹೇಗಿತ್ತು? ಅದರ ಅಧಿಕಾರದ ಬಲವೇನು? ಅದರ ಮಾತಿಗೆ ಸಿಗುವ ಗೌರವವೇನು? ಎನ್ನುವುದನ್ನು ನಮಗೆ ಇಂದು ಪ್ರತ್ಯಕ್ಷವಾಗಿ ಕಾಣಲು ಸಾಧ್ಯವಿಲ್ಲ. ಇದರಿಂದಾಗಿ ಅಲ್ಲಿರುವ ಸಂಸ್ಕೃತಿಯ ಮಹತ್ವವನ್ನು ತಿಳಿಯಲು ಕಷ್ಟ. ಆದ್ದರಿಂದ ಈ ರೀತಿಯ ಸಾಂಸ್ಕೃತಿಕ ವಿವರಗಳುಳ್ಳ ಸಂಪತ್ತನ್ನು ಮುಂದಿನ ತಲೆಮಾರಿಗೆ ತಿಳಿಸುವುದು ಅವಶ್ಯಕವಾಗಿದೆ. ಇದಕ್ಕಾಗಿ ಸಂಸ್ಕೃತಿಗೆ ಸಂಬಂಧಿಸಿದ ಅನೇಕ ವಿವರಗಳು ಬೇರೆ ಬೇರೆ ಮೂಲಗಳಿಂದ ಲಭಿಸುತ್ತದೆ. ಖ್ಯಾತ ಕಾದಂಬರಿಕಾರ ಡಿ.ಕೆ. ಚೌಟರು ತನ್ನ ಮಿತ್ತಬೈಲ್ ಯಮುನಕ್ಕ ಕಾದಂಬರಿಯಲ್ಲಿ

ತುಳುನಾಡಿನ ಒಂದು ಪ್ರಮುಖ ಜಾತಿಯವರಾದ ಬಂಟರ ಗುತ್ತಿನ ಬಗೆಗಿನ ವಿವರವನ್ನು ಇಲ್ಲಿ ತಿಳಿಸಿದ್ದಾರೆ.

ಅಗಾಧ ಸಂಸ್ಕೃತಿಯ ಮೂಲವಾದ 'ಗುತ್ತು' ಗತಕಾಲದಲ್ಲಿ ತನ್ನ ವೈಭವವನ್ನು ಹೇಗೆ ಪಡೆದಿತ್ತು, ಅದು ರೂಪುಗೊಂಡ ಬಗೆ ಹೇಗೆ ಎನ್ನುವುದನ್ನು ಕಾದಂಬರಿಯಲ್ಲಿ ತಿಳಿಸಿದ್ದಾರೆ. ಗುತ್ತಿನ ಹುಟ್ಟಿನಿಂದ ಹಿಡಿದು ಅದರ ಸಂಪೂರ್ಣ ಕಾರ್ಯವೈಖರಿಯನ್ನು ವಿವರ ವಿವರವಾಗಿ ಬಿಚ್ಚಿಟ್ಟಿದ್ದಾರೆ. ಇದರ ಮೂಲ ಉದ್ದೇಶ ಅಲ್ಲಿಯ ಸಂಸ್ಕೃತಿಯನ್ನು ವ್ಯಕ್ತಪಡಿಸುವುದಾಗಿದೆ. ಈ ಮೂಲಕ ಕಾದಂಬರಿಯಲ್ಲಿ ಗುತ್ತು ಸಂಸ್ಕೃತಿಯ ಪ್ರತಿನಿಧೀಕರಣವನ್ನು ಅಧ್ಯಯನ ಮಾಡುವ ಉದ್ದೇಶದಿಂದಾಗಿ ಈ ಕೆಳಗಿನಂತೆ ವಿಭಾಗಗಳನ್ನು ಮಾಡಲಾಗಿದೆ.

ಅಧ್ಯಾಯ ೧ : ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಅಧ್ಯಾಯ ೨ : ಚೌಟರು ಮತ್ತು ಅವರ ಕೃತಿಗಳು

ಅಧ್ಯಾಯ ೩ : ಗುತ್ತಿನ ಮನೆಗಳು ಮತ್ತು ಅದರ ಸಂರಚನೆ

೩.೧ : ಗುತ್ತು ಪದದ ಅರ್ಥ ಮತ್ತು ವ್ಯಾಪ್ತಿ

೩.೨ : ಗುತ್ತಿನ ಮನೆಯ ವಾಸ್ತು ಹಾಗೂ ಸಾಮಾಜಿಕ ಚಿತ್ರಣ

ಅಧ್ಯಾಯ ೪ : ಗುತ್ತು ಸಂಸ್ಕೃತಿಯ ವೈಶಿಷ್ಟ್ಯ

೪.೧ : ಸಾಮಾಜಿಕ ಸ್ಥಾನಮಾನ ಹಾಗೂ ಆಚರಣೆಗಳು

೪.೨ : ಧಾರ್ಮಿಕ ಭಾವನೆಗಳು

೪.೩ : ಗುತ್ತು ಮತ್ತು ರಾಜಕೀಯ

೪.೪ : ಸ್ವಾತಂತ್ರ್ಯ ಸಂಗ್ರಾಮದಲ್ಲಿ ಗುತ್ತಿನ ಪಾತ್ರ

೪.೫ : ಗುತ್ತು ಸಂಸ್ಕೃತಿಯ ಬೆಳವಣಿಗೆಗೆ ಇತರರ ಕೊಡುಗೆ

ಅಧ್ಯಾಯ ೫ : ಉಪಸಂಹಾರ

*****

# ಅಧ್ಯಾಯ – ೨

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

'ಆನಂದ ಕೃಷ್ಣ' ಎಂಬ ಕಾವ್ಯನಾಮದಿಂದ ಕರೆಸಿಕೊಳ್ಳುವ ಶ್ರೀಕೃಷ್ಣಾನಂದ ಚೌಟರು ೧೮ ಜೂನ್ ೧೯೩೮ರಂದು ಮಂಜೇಶ್ವರ ಸಮೀಪದ ಮೀಯಪದವಿನಲ್ಲಿ ಜನಿಸಿದರು. ಪ್ರಾಥಮಿಕ ಮತ್ತು ಪ್ರೌಢಶಿಕ್ಷಣವನ್ನು ಹುಟ್ಟೂರಿನಲ್ಲಿ ಹಾಗೂ ಪದವಿ ಶಿಕ್ಷಣವನ್ನು ಮಂಗಳೂರಿನ ಸರಕಾರಿ ಕಾಲೇಜಿನಲ್ಲಿ, ಮುಂಬೈ ವಿಶ್ವವಿದ್ಯಾನಿಲಯದಿಂದ ಅರ್ಥಶಾಸ್ತ್ರದಲ್ಲಿ ಸ್ನಾತಕೋತ್ತರ ಪದವಿಯನ್ನು ಪಡೆದರು. ಬೆಂಗಳೂರಿನಲ್ಲಿ ಹತ್ತು ಹಲವು ಸಂಸ್ಥೆಗಳನ್ನು ಹುಟ್ಟು ಹಾಕಿ ದುಡಿಯುತ್ತಿರುವ ಚೌಟರು, ೨ ಕಥಾಸಂಕಲನ, ೩ ನಾಟಕ ಹಾಗೂ ೨ ಕಾದಂಬರಿಗಳನ್ನು ರಚಿಸಿ ಸಾಹಿತ್ಯ ಲೋಕಕ್ಕೆ ಅಮೂಲ್ಯ ಕೊಡುಗೆಯನ್ನು ನೀಡಿದ್ದಾರೆ. ಇವರ ಸಾಹಿತ್ಯ ಸಾಧನೆಗಾಗಿ ಹಲವಾರು ಪ್ರಶಸ್ತಿ, ಪುರಸ್ಕಾರಗಳು ಸಂದಿವೆ.

ಚೌಟರ ಎಲ್ಲಾ ಕೃತಿಗಳಲ್ಲೂ ತುಳುನಾಡಿನ ಸಂಸ್ಕೃತಿ ಅನಾವರಣಗೊಳ್ಳುತ್ತಿದೆ. ಸಾಮಾಜಿಕ ಅಸಮಾನತೆಯನ್ನು, ಜಾತಿ ವ್ಯವಸ್ಥೆಯನ್ನು ಮೌನವಾಗಿ ವಿರೋಧಿಸುವುದು ವ್ಯಕ್ತಗೊಳ್ಳುತ್ತದೆ. ಗುತ್ತಿನ ಮನೆಯ ಆಂತರಿಕ ಕಲಹ, ಅಧಿಕಾರಕ್ಕಾಗಿ ನಡೆಯುವ ಘರ್ಷಣೆಯೂ ವ್ಯಕ್ತಗೊಳ್ಳುತ್ತದೆ. ತುಳುನಾಡಿನ ಆಹಾರ ಪದ್ಧತಿ, ಅತಿಥಿ ಸತ್ಕಾರ ಇವನ್ನೆಲ್ಲವನ್ನೂ ಅವರ ಕೃತಿಗಳಲ್ಲಿ ತಿಳಿಸಿದ್ದಾರೆ. ನಮ್ಮಿಂದ ದೂರ ಹೋಗಿರುವ ಸಂಸ್ಕೃತಿಯ ಚಿತ್ರಣವನ್ನು ಲೇಖಕರು ಮತ್ತೆ ತಂದು ನಮ್ಮ ಮುಂದಿಡುವ ಪ್ರಯತ್ನವನ್ನು ತಮ್ಮ ಕೃತಿಗಳಲ್ಲಿ ಮಾಡಿದ್ದಾರೆ. ತುಳುನಾಡಿನಲ್ಲಿ ಆರಾಧನೆಗೊಳಪಡುವ ಭೂತಗಳು, ಆ ಭೂತಗಳಿಂದ ಬಲಯುತವಾಗಿ ತಮ್ಮ ಪರವಾಗಿ ಮಾತನಾಡಿಸುವುದು ಇಂತಹ ಎಲ್ಲಾ ಚಿತ್ರಣದ ಮೂಲಕ ಹಣಬಲ, ಭುಜಬಲ ಮತ್ತು ಅಧಿಕಾರಬಲಗಳು ಮಾಡುವ ಕೆಲಸಗಳನ್ನು ತಿಳಿಸಿದ್ದಾರೆ. ತುಳುಮಣ್ಣಿನಲ್ಲಿ ನಡೆಯುವ ಈ ರೀತಿಯ ಚಿತ್ರಣವನ್ನು ತಿಳಿಸುವುದರ ಮೂಲಕ ವಾಸ್ತವ ಜಗತ್ತಿನಲ್ಲಿ ನಡೆಯುವ ಘಟನೆಗಳು ಒಂದಕ್ಕೊಂದು ಹೊಂದಿಕೊಳ್ಳುವುದನ್ನು ನಮಗೆ ತಿಳಿಸಿದ್ದಾರೆ. ತುಳುನಾಡಿನ ಸಮಗ್ರ ಸಂಸ್ಕೃತಿಯ ಅನಾವರಣವು ಅವರ ಕೃತಿಗಳಲ್ಲಿ ಮೂಡಿಬಂದಿದೆ. ಈ ಕಾರಣಗಳಿಂದಾಗಿಯೇ ಅವರ ಕೃತಿಗಳಲ್ಲಿ ಒಂದಾಗಿರುವ " 'ಮಿತ್ತಬೈಲ್ ಯಮುನಕ್ಕ' ಕಾದಂಬರಿ ತುಳುವಿನ 'ಕಾನೂರು ಸುಬ್ಬಮ್ಮ ಹೆಗ್ಗಡತಿ'[೧] ಎಂದು ನಾಗತಿಹಳ್ಳಿ ಚಂದ್ರಶೇಖರ್ ಹೇಳಿದ್ದಾರೆ."

---

೧ ಹಾಯ್ ಬೆಂಗಳೂರು – ಫೆಬ್ರವರಿ ೩, ೨೦೧೧

ಮೂಲ ತುಳುಭಾಷೆಯ ಈ ಕಾದಂಬರಿಯನ್ನು ಬ್ಯಾರಿ ಮಾತೃಭಾಷೆಯ ಕನ್ನಡದ ಪ್ರಸಿದ್ಧ ಕತೆಗಾರ ಮುಹಮ್ಮದ್ ಕುಳಾಯಿಯವರು ಕನ್ನಡಕ್ಕೆ ಅನುವಾದಿಸಿದರು. ತುಳುಸಂಸ್ಕೃತಿಯ ವೈಭವವನ್ನು ವ್ಯಕ್ತಪಡಿಸುವ ಈ ಕಾದಂಬರಿಯು ಕೇವಲ ತುಳು ಮಾತೃಭಾಷೆ ಬಲ್ಲವರಿಗೆ ಮಾತ್ರ ಮೀಸಲಾಗಿರಬಾರದು ಎನ್ನುವ ಉದ್ದೇಶದಿಂದ ಬಹಳ ಜಾಗರೂಕತೆಯಿಂದ ಕನ್ನಡಕ್ಕೆ ಅನುವಾದಿಸುವ ಕೆಲಸವನ್ನು ಕೈಗೊಂಡರು. ಇದರ ಪರಿಣಾಮವಾಗಿ ಮೂಲಭಾಷೆಯ ಪರಿಚಯವಿಲ್ಲದ ಅಸಂಖ್ಯಾತ ಕನ್ನಡ ಓದುಗರು ಓದುವಂತಾಯಿತು. ಹಾಗೆಯೇ, ಶ್ರೀ ಬಸವರಾಜ ಸೂಳೇರಿಪಾಳ್ಯ ಈ ಕಾದಂಬರಿಗೆ ರಂಗರೂಪವನ್ನು ಕೊಟ್ಟ ಪರಿಣಾಮವಾಗಿ ಅನೇಕ ಪ್ರದರ್ಶನವನ್ನು ನಡೆಸಿದರು. ಅಗೋಚರವಾಗಿರುವ ಸಂಸ್ಕೃತಿಯನ್ನು ಬೆಳಕಿನೆಡೆಗೆ ತರುವ ಕೆಲಸವೂ ಇದರಿಂದಾಯಿತು. ಈ ಕಾದಂಬರಿಯು ಕೇವಲ ಬಂಟಸಮಾಜ, ಅಥವಾ ಗುತ್ತು ಸಂಸ್ಕೃತಿಯನ್ನು ವೈಭವೀಕರಿಸುವ ಕೆಲಸ ಮಾಡುತ್ತಿಲ್ಲ. ಅದರ ಒಟ್ಟು ಒಳಿತು ಕೆಡುಕುಗಳ ವಾಸ್ತವಾಂಶವನ್ನು ನಮ್ಮ ಮುಂದಿಡುತ್ತದೆ. ಆದ್ದರಿಂದ ಡಾ। ಯು.ಆರ್. ಅನಂತಮೂರ್ತಿಯವರು 'ಭಾರತೀಯ ಭಾಷೆಗಳಲ್ಲೇ ಸೃಷ್ಟಿಯಾದ ಉತ್ತಮ ಕಾದಂಬರಿಗಳಲ್ಲಿ ಒಂದು' ಎಂದು ಅನುವಾದ ಕೃತಿಗೆ ಬೆನ್ನುಡಿ ಬರೆದರು.

ಟಿಪ್ಪುಸುಲ್ತಾನನ ಆಡಳಿತದ ಕಾಲದಿಂದ ಹಿಡಿದು ಗಾಂಧೀಜಿಯ ಹತ್ಯೆಯ ತನಕ ಕಾದಂಬರಿಯು ವಿಸ್ತಾರತೆಯನ್ನು ಪಡೆದುಕೊಂಡಿದೆ. ಸ್ವಾತಂತ್ರ್ಯ ಹೋರಾಟದ ಕಾವು ಕಾದಂಬರಿಯಲ್ಲಿ ವ್ಯಕ್ತಗೊಳ್ಳುತ್ತದೆ. ಭೂತ ಮತ್ತು ವರ್ತಮಾನವನ್ನು ತಿಳಿಸುವುದರ ಮೂಲಕ ಸಂಸ್ಕೃತಿಯ ಬದಲಾವಣೆಯನ್ನು ವ್ಯಕ್ತಪಡಿಸುತ್ತಾರೆ. ಸಾಮಾನ್ಯವಾಗಿ 'ಗುತ್ತು' ಎನ್ನುವುದು ಬಂಟರ ಮನೆ ಎನ್ನುವ ಭಾವನೆ ಇದೆ ಆದರೆ ಅದೊಂದು ಮನೆ ಮಾತ್ರವಲ್ಲ, ಅದು ಸಂಸ್ಕೃತಿಯ ಮೂಲವೂ ಹೌದು. ಹಾಗೆಯೇ ಬಂಟರ ಗುರುತಿನ ಸಂಕೇತವೂ ಹೌದು ಎನ್ನುವುದು ವ್ಯಕ್ತಗೊಳ್ಳುತ್ತದೆ. ಕಾದಂಬರಿಯಲ್ಲಿ 'ಗುತ್ತು' ಎನ್ನುವುದು ಯಜಮಾನಿಕೆಯ ಭಾಗವಾಗಿ ಬರುತ್ತದೆ. ಆದ್ದರಿಂದ ಒಬ್ಬರ ಕೈಗೆಳಗೆ ಮತ್ತೊಬ್ಬರು ಬರಲು ಸಾಧ್ಯವಿಲ್ಲ. ಇದರಿಂದಾಗಿ ಕೌಟುಂಬಿಕ ಘರ್ಷಣೆ, ಕೊಲೆ ಇತ್ಯಾದಿಗಳ ಮುಖಾಂತರ ಅಧಿಕಾರದ ದಾಹವು ವ್ಯಕ್ತಗೊಳ್ಳುತ್ತದೆ. 'ಗುತ್ತು' ಕುಟುಂಬಕ್ಕೆ ಗೌರವ, ಮರ್ಯಾದೆಯನ್ನು ಕೊಡುವಂತಹದು. ಆದ್ದರಿಂದ ಅದರ ಉಳಿವಿಗಾಗಿ ಯಾವ ತ್ಯಾಗಕ್ಕೂ ಅವರು ಸಿದ್ಧರಿದ್ದಾರೆ. ಕಾದಂಬರಿಯಲ್ಲಿ ಪ್ರಮುಖವಾಗಿ ಮಿತ್ತಬೈಲ್‌ಗುತ್ತು, ಮಜಲೋಡಿಗುತ್ತು, ತಾಳಿಪ್ಪಾಡಿಗುತ್ತು, ಉದಾರಗುತ್ತು, ಪಟ್ಟದಗುತ್ತು ಕಾಣಸಿಗುತ್ತದೆ. ಇವುಗಳೆಲ್ಲವೂ ಸಾಂಸ್ಕೃತಿಕವಾಗಿ ಒಂದೇ ತರಹದ ಲಕ್ಷಣಗಳನ್ನು ಹೊಂದಿದೆ. ಕಾದಂಬರಿಯ ಮೂಲ ಇರುವಂತಹುದು 'ಮಿತ್ತಬೈಲ್'ನಲ್ಲಿ. ಮಿತ್ತಬೈಲ್‌ನ್ನು ಗುತ್ತಾಗಿ ಪರಿವರ್ತಿಸುವಲ್ಲಿ

'ಮಂಜಣಾಳ್ವ' ಪಟ್ಟ ಶ್ರಮವು ಒಟ್ಟು ಬಂಟರ ಶ್ರಮದ ಬದುಕನ್ನು ತಿಳಿಸುತ್ತದೆ. ಕೇವಲ 'ಗುತ್ತು' ಎನ್ನುವುದು ದೈಹಿಕ ಶ್ರಮವಿಲ್ಲದೆ ನಿರ್ಮಾಣವಾಗುವಂತಹುದಲ್ಲ. ಕೃಷಿಯನ್ನು ಮಾಡುವುದರ ಮುಖಾಂತರ ಹೆಚ್ಚೆಚ್ಚು ಆರ್ಥಿಕ ಸಂಪತ್ತನ್ನು ಕೂಡಿಸಿಕೊಳ್ಳುವುದು, ಗೇಣಿಗೆ ಭೂಮಿಯನ್ನು ಪಡಕೊಳ್ಳುವುದು. ಗುಡ್ಡವನ್ನು ಅಗೆದು ಗದ್ದೆ, ತೋಟ ನಿರ್ಮಾಣ ಮಾಡುವುದು, ನೀರಿಗಾಗಿ ಏತವನ್ನು ತಯಾರು ಮಾಡುವುದು, ಕೆಲಸಕ್ಕಾಗಿ ಜಮೀನಿನ ಪಕ್ಕದಲ್ಲಿ ಮುಗೇರರಿಗೆ ಮನೆಯನ್ನು ಕಟ್ಟಿ ಕೊಡುವುದು, ಆರ್ಥಿಕವಾಗಿ, ಸಾಮಾಜಿಕವಾಗಿ, ಹಿಂದುಳಿದ ಮುಗೇರರು ಈ ರೀತಿಯ ಸಹಾಯವನ್ನು ಪಡೆಯುವುದರಿಂದ ಸದಾಕಾಲ ಅವರ ಜಮೀನಿನಲ್ಲೇ ದುಡಿದು ಗುತ್ತು ಮನೆಯ ಒಂದು ಭಾಗದಂತೆ ಇದ್ದು ಬಿಡುತ್ತಾರೆ. ಒಂದು ರೀತಿಯಲ್ಲಿ ಇದೊಂದು ಶೋಷಣೆಯ ಪ್ರತೀಕದಂತೆ ಕಂಡುಬಂದರೂ, ಸಾಮಾಜಿಕವಾಗಿ ದುರ್ಬಲರಿಗೆ ಈ ರೀತಿಯ ಅವಕಾಶವನ್ನು ಮಾಡಿಕೊಡುವುದು ವಿಶೇಷ.

ಭೂತಾಳ ಪಾಂಡ್ಯನಿಂದ ಬಂದಿರುವ ಅಳಿಯಸಂತಾನ ಕಟ್ಟು ಬಂಟರಲ್ಲಿ ಪ್ರಮುಖವಾಗಿ ಕಾಣಸಿಗುತ್ತದೆ. ಇದರಿಂದಾಗಿ ಸೋದರಳಿಯನು ಮನೆಯ ಅಧಿಕಾರವನ್ನು ಪಡೆಯುತ್ತಾನೆ. ಮನೆಯೊಡತಿಯ ಯಜಮಾನಿಕೆಯು ಬಂಟರಲ್ಲಿ ಹೆಚ್ಚಾಗಿ ಕಾಣಿಸಿಕೊಳ್ಳುತ್ತದೆ. ಕಾದಂಬರಿಯಲ್ಲಿಯೂ ಯಮುನಕ್ಕ ಇಡೀ ಕುಟುಂಬದ ಜವಾಬ್ದಾರಿಯನ್ನು ಹೊತ್ತು, ಅದರ ನಿರ್ವಹಣೆಯನ್ನು ಮಾಡಿದ್ದಾಳೆ. ತಾಯಿವಾತ್ಸಲ್ಯ, ಮಮತೆ, ಅಧಿಕಾರ, ದರ್ಪ, ಹಿಂಸೆಯೆಲ್ಲವೂ ಮಾತೃಹೃದಯದ ಯಮುನಕ್ಕನಲ್ಲಿದೆ. ಹೆಣ್ಣು ಕೇವಲ ಅಡುಗೆಮನೆಯ ಅಧಿಕಾರವನ್ನು ಪಡೆಯುವುದು ಮಾತ್ರವಲ್ಲ, ಆಡಳಿತವನ್ನು ನಡೆಸಲು ಸಮರ್ಥಳು ಎನ್ನುವ ಅಂಶ ಗುತ್ತು ಸಂಸ್ಕೃತಿಯಲ್ಲಿ ವ್ಯಕ್ತಗೊಳ್ಳುತ್ತದೆ. ಕೆಲವು ಸಂದರ್ಭಗಳಲ್ಲಿ ದುರಹಂಕಾರ, ಅಧಿಕಾರದ ಮದ ಎಂದು ಅನಿಸಿಕೊಂಡರೂ ವಾಸ್ತವವಾಗಿ ಅದು ತಮ್ಮ ಅಸ್ತಿತ್ವವನ್ನು ಭದ್ರಪಡಿಸುವುದು ಹಾಗೂ ವಿಸ್ತರಿಸುವುದಾಗಿದೆ.

ಆಧುನೀಕರಣದ ಪ್ರವೇಶದಿಂದಾಗಿ ಸಂಸ್ಕೃತಿಯು ಕ್ಷೀಣಗೊಳ್ಳುತ್ತಿದೆ. ಆದ್ದರಿಂದ ಇಂದು ಸಂಸ್ಕೃತಿಯೆನ್ನುವುದು ನಾಗರೀಕ ಪ್ರಪಂಚದಿಂದ ಶಿಥಿಲಗೊಂಡು, ಆಧುನಿಕತೆಯ ಪ್ರವೇಶವನ್ನು ಪಡೆಯದ ಹಳ್ಳಿಗಳಲ್ಲಿ ಸ್ವಲ್ಪಮಟ್ಟಿಗೆ ಇದೆ ಎಂದು ಭಾವಿಸಿಕೊಳ್ಳಬೇಕಾದ ಸಂದರ್ಭ ಬಂದಿದೆ. ಇದರ ಪರಿಣಾಮವಾಗಿ ಗುತ್ತುಗಳಾಗಿರಬಹುದು, ಅದರ ಸಂಸ್ಕೃತಿಯಾಗಿರಬಹುದು ಕಾಣಿಸಲು ಸ್ವಲ್ಪ ಕಷ್ಟವಾಗಿದೆ. ಆ ಸಂಸ್ಕೃತಿಯ ಆಳವನ್ನು, ಸತ್ವವನ್ನು ಇಂದು ಪುಸ್ತಕಗಳ ಮುಖಾಂತರ ತಿಳಿಯಬೇಕಾದ ಕಾಲ ಬಂದೊದಗಿದೆ. ಗುತ್ತಿನ ಆಸ್ತಿ ಬೇರೆ ಬೇರೆ ರೂಪದಲ್ಲಿ ಕೈತಪ್ಪಿ ಹೋಗಿದೆ. ಮೂಲದ ಜನರು ಉಪಕಸುಬುಗಳನ್ನು ಮಾಡಿಕೊಂಡು

ಜೀವಿಸಲಾರಂಭಿಸಿದ್ದಾರೆ. ಇರುವ ಭೂಮಿಯಲ್ಲಿ ದುಡಿಯಲು ಜನರಿಲ್ಲದಾಗಿ ಕೆಲವು ಗುತ್ತಿನ ಮನೆಗಳು ನಾಶಹೊಂದಿವೆ. ಕೆಲವನ್ನು ಪರಂಪರೆಯ ಸಂಕೇತದಂತೆ ಸಂರಕ್ಷಿಸುತ್ತಾರೆ. ಒಂದು ಕಾಲದಲ್ಲಿ ನ್ಯಾಯತೀರ್ಮಾನದ, ದೈವದೇವರುಗಳ ನೆಲೆಯಾಗಿರುವ, ತುಳು ಮಣ್ಣಿನ ಸಂಸ್ಕೃತಿಯ ಕೇಂದ್ರವಾಗಿರುವ ಗುತ್ತು ಇಂದು ಸಂಸ್ಕೃತಿಯ ಸತ್ವವನ್ನು ಕಳೆದುಕೊಂಡು ಅನಾಥವಾಗಿದೆ. ಈ ನಿಟ್ಟಿನಲ್ಲಿ ಡಿ.ಕೆ. ಚೌಟರು ಮಿತ್ತಬೈಲು ಯಮುನಕ್ಕ ಕಾದಂಬರಿಯಲ್ಲಿ ಗುತ್ತು ಸಂಸ್ಕೃತಿಯನ್ನು ದಾಖಲಿಸುವ ಪ್ರಯತ್ನವನ್ನು ಮಾಡಿದ್ದಾರೆ. ಇದರಿಂದ ಮುಂದಿನ ಪೀಳಿಗೆಯು ಈ ಸಂಸ್ಕೃತಿಯ ಪ್ರಾಮುಖ್ಯತೆಯನ್ನು ಅರಿತುಕೊಂಡು ತುಳುನಾಡಿನ ಭವ್ಯ ಪರಂಪರೆ ಈ ಸಂಸ್ಕೃತಿಯಲ್ಲಿದೆ ಎಂದು ಅಭಿಮಾನಪಟ್ಟುಕೊಳ್ಳಬೇಕು ಎಂಬ ಕನಸು ಅವರದ್ದಾಗಿದೆ.

ಅಧಿಕಾರದ ಕಚ್ಚಾಟದಿಂದಾಗಿ ಗುತ್ತಿನ ಮನೆ, ಅದರ ಜೊತೆಗೆ ಅಲ್ಲಿಯ ಸಂಸ್ಕೃತಿಯು ಮಣ್ಣುಪಾಲಾಗುವುದು ನಮ್ಮ ಕಣ್ಣೆದುರೆ ಕಾಣಿಸಿಕೊಳ್ಳುತ್ತದೆ. ಇನ್ನೂ ಕೆಲವು ಕಾಲಗಳ ನಂತರ ಇಂತಹ ಒಂದು ಸಂಸ್ಕೃತಿಯನ್ನು ಊಹಿಸಿಕೊಳ್ಳಲೂ ಕಷ್ಟವಾಗಬಹುದು. ಆಧುನಿಕ ಜಗತ್ತಿನ ಆಕರ್ಷಣೆಗೆ ಒಳಗಾಗಿ, ಹಳ್ಳಿ ಬದುಕಿನಿಂದ ದೂರ ಉಳಿಯುವ ಯುವಜನಾಂಗವು ಇದರ ಆಚರಣೆ, ಸಂಪ್ರದಾಯಗಳನ್ನು ಕಾಣಲು ಅಸಾಧ್ಯವಾಗಿದೆ. ಅದಕ್ಕಾಗಿ ಬರಹಗಾರರು ತಮ್ಮ ಕೃತಿಗಳ ಮೂಲಕ ಅದನ್ನು ದಾಖಲಿಸುವ ಪ್ರಯತ್ನ ಮಾಡಿದ್ದಾರೆ. ಈ ನಿಟ್ಟಿನಲ್ಲಿ 'ಮಿತ್ತಬೈಲ್ ಯಮುನಕ್ಕ' ಕಾದಂಬರಿಯು ಸಂಸ್ಕೃತಿಯ ಪ್ರತಿನಿಧೀಕರಣವನ್ನು ವ್ಯಕ್ತಗೊಳಿಸುವ ಒಂದು ಉತ್ತಮ ಕೃತಿಯಾಗಿದೆ.

ಕಾದಂಬರಿಯಲ್ಲಿ ವ್ಯಕ್ತಗೊಳ್ಳುವ ಅಂಶಗಳ ಮುಖಾಂತರ ಗುತ್ತು ಸಂಸ್ಕೃತಿಯನ್ನು ದಾಖಲಿಸುವ ಪ್ರಯತ್ನ ಇಲ್ಲಿ ಮಾಡಲಾಗಿದೆ. ಕಾದಂಬರಿಯಲ್ಲಿಯೂ 'ಗುತ್ತು' ಸಂಸ್ಕೃತಿಯು ವಿವರವಾಗಿ ಪೋಣಿಸಲ್ಪಟ್ಟಿದೆ. ಹಾಗಿಯೇ ಹೊರಗೆ ಸಮಾಜವನ್ನು ನೋಡಿದಾಗ ಅಲ್ಲಿಯೂ ಈ ಅಂಶಗಳು ಬಲಗೊಳ್ಳುತ್ತವೆ. ನಮ್ಮ ಸುತ್ತಮುತ್ತ ಕಾಣಸಿಗುವ ಅನೇಕ ಗುತ್ತಿನ ಮನೆಗಳೂ ಕೂಡಾ ಕಾದಂಬರಿಯಲ್ಲಿ ಬರುವಂತೆ ಹೆಚ್ಚಿನ ಆಚಾರ-ವಿಚಾರ ಅಧಿಕಾರಕ್ಕಾಗಿ ಘರ್ಷಣೆ ಮಾಡುತ್ತಾ ಸಂಸ್ಕೃತಿಯ ಪ್ರತಿನಿಧಿಯಂತೆ ಗೋಚರವಾಗುತ್ತದೆ. ಅದರ ಜೊತೆಗೆ ಮಾನವ ಲೋಕದ ಮುಗಿಯದ ದಾಹ, ಮತ್ಸರ, ಪ್ರತಿರೋಧ, ಮೋಸ ಕಾಣಸಿಗುತ್ತದೆ. ದೈನಂದಿನ ಬದುಕಿನ ಚಿತ್ರಣ, ವಾರ್ಷಿಕ ಪರ್ವ, ಹಬ್ಬ ಹರಿದಿನಗಳು, ಕೂಡುಕುಟುಂಬ ಮನೆಯ ಯಜಮಾನಿಕೆ ಅದರ ಮಧ್ಯೆ ಅದನ್ನು ಮೌನವಾಗಿ ಪ್ರತಿಭಟಿಸುವ ಗುಂಪು, ಅರಳುವ ನರಳುವ ಬದುಕು ಇವೆಲ್ಲವೂ ಆ 'ಗುತ್ತು' ಎನ್ನುವ ವ್ಯವಸ್ಥೆಯೊಳಗೆ ಬರುತ್ತದೆ. ಈ

ಸಂಸ್ಕೃತಿಯ ಬಗ್ಗೆ ಪರವಿರೋಧಗಳು ವ್ಯಕ್ತಗೊಂಡು ವ್ಯವಸ್ಥೆಯನ್ನು ಬಲಪಡಿಸುವ ಅಥವಾ ವಿರೋಧಿಸುವ ಚಿಂತನೆಗಳು ಕೂಡಾ ನಡೆದಿವೆ. ಶೋಷಣೆಯ ಭಾಗದಂತೆ ಕಾಣಿಸಿಕೊಂಡರೂ, ಅದು ಆಯಾ ಕಾಲದ ಸಾಮಾಜಿಕ ವ್ಯವಸ್ಥೆಗೆ ಹೊಂದಿಕೊಂಡಂತೆ ಇದ್ದುಬಿಟ್ಟಿದೆ. ಕಾದಂಬರಿಯಲ್ಲಿ ಶೋಷಣೆಯ ಅಂಶಗಳು ಅಲ್ಪಪ್ರಮಾಣದಲ್ಲಿ ಕಾಣಿಸಿಕೊಂಡರೂ ಗಾಂಧೀಜಿಯ ಚಿಂತನೆಗಳ ಪರಿಣಾಮವಾಗಿ ಸಮಾನತೆಯ ಗಾಳಿ ಬೀಸತೊಡಗಿದೆ. ಗುತ್ತು ಸಂಸ್ಕೃತಿಯ ಪ್ರತಿನಿಧೀಕರಣ ನಡೆಯುತ್ತದೆಯೇ ಹೊರತು ವೈಭವೀಕರಣವನ್ನು ಕಾದಂಬರಿಕಾರರು ಇಲ್ಲಿ ಮಾಡಹೊರಟಿಲ್ಲ. ತುಳುನಾಡಿನ ಸಕಲ ಸಂಸ್ಕೃತಿಯ ಪೋಷಣೆಯನ್ನು ಮಾಡುವ ಮತ್ತು ಸಂಸ್ಕೃತಿಯ ಅಂಶಗಳು ಎಳೆಎಳೆಯಾಗಿ ಕೃತಿಯಲ್ಲಿ ಹೊರಹೊಮ್ಮಿದೆ.

*****

# ಅಧ್ಯಾಯ – ೩

# ಗುತ್ತಿನ ಮನೆಗಳು ಮತ್ತು ಅದರ ಸಂರಚನೆ

## ೩.೧ : 'ಗುತ್ತು' ಪದದ ಅರ್ಥ ಮತ್ತು ವ್ಯಾಪ್ತಿ

ತುಳುನಾಡಿನಲ್ಲಿ ಆರ್ಥಿಕವಾಗಿ ಪ್ರಬಲರಾಗಿರುವ ಜಾತಿಗಳಲ್ಲಿ ಬ್ರಾಹ್ಮಣರ ನಂತರ ಬರುವವರು ಬಂಟರು. ಅವರ ಆರ್ಥಿಕ ಸಾಮರ್ಥ್ಯ, ಅಧಿಕಾರ, ಹಾಗೂ ವಿಸ್ತಾರವಾದ ಕೃಷಿಭೂಮಿ ಇವೆಲ್ಲವುದರ ಪರಿಣಾಮವಾಗಿ ದೊಡ್ಡದಾದ ಸುಂದರ ಮನೆಗಳು ಹೆಚ್ಚಾಗಿ ಅವರದಾಗಿವೆ. ಇವುಗಳನ್ನು ಸಾಮಾನ್ಯವಾಗಿ 'ಗುತ್ತು' ಅಥವಾ 'ಗುತ್ತಿನ ಮನೆ' ಎಂದು ಕರೆಯುತ್ತಿದ್ದರು. 'ಗುತ್ತು' ಎನ್ನುವ ಪದದ ಮೂಲ 'ಗುತ್ತಿಗೆ' ಎಂಬುದಿರಬೇಕು. ಹಿಂದಿನ ಅರಸರು ಗ್ರಾಮಮಟ್ಟದಲ್ಲಿ ಕಂದಾಯ ವಸೂಲಿಗೆ, ಸಣ್ಣಪುಟ್ಟ ನ್ಯಾಯ ತೀರ್ಮಾನಕ್ಕೆ, ಊರಿನ ದೈವ, ದೇವರುಗಳ ಕಾಲಾವಧಿ ಉತ್ಸವಗಳನ್ನು ನಡೆಸುವ ಅನುಕೂಲತೆಗಳಿಗಾಗಿ ಭೂಮಿಯನ್ನು 'ಗುತ್ತಿಗೆಗೆ' ಕೊಡುತ್ತಿದ್ದರು. ಈ 'ಗುತ್ತಿಗೆ'ಯನ್ನು ಸಾಮಾನ್ಯವಾಗಿ ಆರ್ಥಿಕವಾಗಿ ಪ್ರಬಲರಾಗಿರುವ ಬಂಟರು ಪಡೆದುಕೊಳ್ಳುತ್ತಿದ್ದರು. ಆದ್ದರಿಂದ ಅಂತಹವರ ಮನೆಗಳನ್ನು 'ಗುತ್ತು' ಅಥವಾ 'ಗುತ್ತಿನ ಮನೆ' ಎಂದು ಕರೆಯುತ್ತಿದ್ದರು. ಇದು ಸಾಮಾನ್ಯವಾಗಿ ಸ್ಥಳನಾಮದ ಜೊತೆಗೆ ಸೇರಿಕೊಂಡು ಬಳಕೆಯಾಗುತ್ತಿತ್ತು. ಉದಾಹರಣೆಗೆ ಮಿತ್ತಬೈಲ್‌ಗುತ್ತು, ಮಜಲೋಡಿ ಗುತ್ತು, ಮಿಜಾರುಗುತ್ತು, ಹೀಗೆ ಸ್ಥಳದ ಜೊತೆಗೆ ಬಳಕೆಯಾಗುವುದರಿಂದ ಅವರ ಅಧಿಕಾರ ವ್ಯಾಪ್ತಿಯ ಪ್ರದೇಶವನ್ನು ಅದು ಸೂಚಿಸುತ್ತಿತ್ತು.

ಬಂಟರು ಕೃಷಿವರ್ಗಕ್ಕೆ ಸೇರಿದವರು. ಕೃಷಿಯೇ ಅವರ ಬದುಕಿನ ಮುಖ್ಯ ಉದ್ಯೋಗ. ನೂರಾರು ಮುಡಿಗದ್ದೆ, ತೋಟವನ್ನು ಹೊಂದಿಕೊಂಡು, ಅದರ ಕೆಲಸಗಳಿಗಾಗಿ ತಮ್ಮ ಜಮೀನಿನ ಸುತ್ತಲೂ ಆರ್ಥಿಕವಾಗಿ ಹಿಂದುಳಿದ ಮುಗೇರರಿಗೆ ಮನೆಯನ್ನು ಕಟ್ಟಿಸಿಕೊಡುತ್ತಿದ್ದರು. ಇವರ ಸಂಬಂಧಗಳೂ ಕೂಡಾ ತುಂಬಾ ವಿಶ್ವಾಸನೀಯವಾಗಿರುತ್ತಿತ್ತು. ಜಮೀನಿನಲ್ಲಿ ಮನೆಯನ್ನು ಕಟ್ಟಿಸಿಕೊಡುವುದರಿಂದ ಕೃಷಿ ಕೆಲಸಕ್ಕೆ ಸುಲಭದಲ್ಲಿ ಆಳುಗಳು ಸಿಗುತ್ತಾರೆ ಹಾಗೂ ಜಮೀನಿನ ಸುತ್ತಲೂ ಮನೆಯಿರುವುದರಿಂದ ಕೃಷಿಯ ರಕ್ಷಣೆ ಕೂಡ ಸಾಧ್ಯವಾಗುತ್ತದೆ. ಕೃಷಿ ಬದುಕಿನ ಜೊತೆಗೆ ಕಂಬುಳ, ಕೋಳಿಅಂಕ, ಊರಜಾತ್ರೆ, ಭೂತಕೋಲ, ಧಾರ್ಮಿಕ ಕೇಂದ್ರಗಳ ಅಧಿಕಾರಗಳನ್ನು ಗುತ್ತಿನಮನೆಯವರು ಹೊಂದಿರುತ್ತಾರೆ. ಇಲ್ಲೆಲ್ಲವೂ ಪುರುಷರು

ಅಧಿಕಾರವನ್ನು ನಡೆಸುವ ಸ್ಥಳವಾಗಿರುತ್ತದೆ. ಮನೆಯೊಳಗಿನ ಅಧಿಕಾರವು ಸಾಮಾನ್ಯವಾಗಿ ಮನೆಯೊಡತಿಯ ಕೈಯಲ್ಲಿರುತ್ತದೆ. ಹೀಗಿರುವಾಗ ಪುರುಷರಿಗೆ ತಮ್ಮ ಅಧಿಕಾರವನ್ನು ಚಲಾಯಿಸಲು ಈ ಜನಪದ ಕಲೆ, ಜನಪದ ಕ್ರೀಡೆ ಅವಕಾಶವನ್ನು ಮಾಡಿಕೊಡುತ್ತದೆ. ಈ ಕಾರಣಗಳಿಂದಾಗಿಯೇ ಗುತ್ತಿನ ಮನೆಗಳಲ್ಲಿ ಕಂಬಳದ ಕೋಣಗಳು, ಅಂಕದ ಕೋಳಿಗಳು, ಅದರ ಆರೈಕೆಯನ್ನು ಮಾಡುವ ಜನರು ಇರುತ್ತಾರೆ. ಗುತ್ತಿನ ಮನೆಯನ್ನು ಪ್ರವೇಶ ಮಾಡಿದಾಗಲೇ, ಕಂಬಳದ ಕೋಣಗಳು ಎದುರಲ್ಲೇ ಕಾಣಿಸುವಂತೆ ಅದರ ಹಟ್ಟಿ, ಮನೆಯ ಮುಂದುಗಡೆ ಅಂಕದ ನೂರಾರು ಕೋಳಿಗಳು ಎದುರುಗೊಳ್ಳುತ್ತವೆ. ದೇವಸ್ಥಾನದ ಜಾತ್ರೆಯಲ್ಲಿ, ಭೂತಕೋಲದ ಸಂದರ್ಭದಲ್ಲಿ ಬ್ರಾಹ್ಮಣರ ನಂತರ ಬೂಳ್ಯವನ್ನು ಪಡೆಯುವ ಅಧಿಕಾರ ಗುತ್ತಿನವರಿಗೆ ಸಲ್ಲಬೇಕು. ಈ ಅಧಿಕಾರಕ್ಕಾಗಿಯೇ ಹೊಡೆದಾಟ, ಸಾವು ಕೂಡಾ ಸಂಭವಿಸಿವೆ.

ಅಳಿಯ ಸಂತಾನ ಕಟ್ಟು ಗುತ್ತಿನ ಮನೆಗಳ ಮೇಲೆ ಅತಿಯಾದ ಪ್ರಭಾವ ಬೀರಿದೆ. ಈ ಪದ್ಧತಿಯು ಸಾಮಾಜಿಕ ಹಿನ್ನೆಲೆಯಲ್ಲಿ ಮಾತೃಪ್ರಧಾನ ಪದ್ಧತಿಯ ಒಂದು ರೂಪವೆಂದು ಕರೆಯಬಹುದು. ಇದರ ಪ್ರಕಾರ ಸೋದರ ಮಾವನ ಆಸ್ತಿಗೆ ಅಳಿಯನು ಹಕ್ಕುದಾರನಾಗಿರುವುದು ಸ್ಪಷ್ಟವಾಗುತ್ತದೆ. ತುಳುನಾಡಿನ ಬೇರೆ ಬೇರೆ ಜನಾಂಗದಲ್ಲಿ ಕಾಣಿಸಿಕೊಂಡರೂ, ಆರ್ಥಿಕವಾಗಿ ಪ್ರಬಲರಾಗಿರುವ ಬಂಟರ ಗುತ್ತಿನ ಮನೆಗಳಲ್ಲಿ ಇದು ಖಚಿತವಾಗುತ್ತದೆ. ಈ ಪದ್ಧತಿಯನ್ನು ಭೂತಾಳ ಪಾಂಡ್ಯನ ಕಟ್ಟು ಎಂದು ಉಲ್ಲೇಖಿಸುತ್ತಾರೆ. ಸಚ್ಚಿದಾನಂದ ಹೆಗ್ಡೆಯವರು " 'ತುಳುನಾಡವರ ಸಮಾಜ' ಎನ್ನುವ ಕೃತಿಯಲ್ಲಿ, ತುಳುವಿನಲ್ಲಿ 'ಭೂತೊಳು ಪಂಡಿನ ಕಟ್ಟು' ಎಂದು ಇದ್ದ ಈ ಪ್ರಾಚೀನ ಸಾಮಾಜಿಕ ವ್ಯವಸ್ಥೆಗೆ 'ಭೂತಾಳ ಪಾಂಡ್ಯನ ಕಟ್ಟುಕಟ್ಟಳೆ' ಎಂದು ಹೆಸರನ್ನಿಟ್ಟು ರಾಜನಮನ್ನಣೆಯನ್ನು ಗಳಿಸಿಕೊಳ್ಳಲಾಗಿದೆ"[೧] ಎನ್ನುವ ಮಾತನ್ನು ಹೇಳಿದ್ದಾರೆ. ಇದರ ಪರಿಣಾಮವಾಗಿ ಅವಿಭಕ್ತ ಕುಟುಂಬ ವ್ಯವಸ್ಥೆಯು ಬಲಗೊಳ್ಳತೊಡಗಿತು. ಕೆಲವು ಗುತ್ತಿನ ಮನೆಗಳಲ್ಲಿ ಒಂದು ಹೊತ್ತಿಗೆ ಒಂದು ಮುಡಿ ಅಕ್ಕಿಯನ್ನು ಬೇಯಿಸಿ ಅನ್ನ ಮಾಡಿಹಾಕಬೇಕಾದ ಸಂದರ್ಭ ಇತ್ತು. ಕೆಲವು ಕಡೆಗಳಲ್ಲಿ ಅಳಿಯ ಸಂತಾನ ಕಟ್ಟಿನ ಪರಿಣಾಮ ಕುಟುಂಬದ ಆಸ್ತಿ ನನಗೆ ಸಿಗುವುದಿಲ್ಲ ಎನ್ನುವ ಕಾರಣದಿಂದಾಗಿ ಕೃಷಿ ಅಭಿವೃದ್ಧಿಕಾರ್ಯಗಳಿಗೆ ಗಮನ ಕೊಡದೆ ಉದಾಸೀನತೆ ತೋರಿಸಿರುವುದು ಕಾಣಸಿಗುತ್ತದೆ.

---

೧ ಬಿ. ಸಚ್ಚಿದಾನಂದ ಹೆಗ್ಡೆ, – ತುಳುನಾಡವರ ಸಮಾಜ – ಪು.ಸಂ. ೨೪

## ೩.೨: ಗುತ್ತಿನ ಮನೆಯ ವಾಸ್ತು ಹಾಗೂ ಸಾಮಾಜಿಕ ಚಿತ್ರಣ

ಗುತ್ತಿನ ಮನೆಯ ಸದಸ್ಯರ ಸಂಖ್ಯೆ ಅಧಿಕವಾಗಿರುವ ಕಾರಣದಿಂದಾಗಿ ಆ ಮನೆಗಳು ಬೃಹದಾಕಾರವಾಗಿತ್ತು. ಒಳ್ಳೆಯ ಗಟ್ಟಿಯಾದ ಕೆತ್ತನೆಯಿಂದ ಕೂಡಿರುವ ಮರವನ್ನು ಮನೆಗೆ ಉಪಯೋಗಿಸುತ್ತಿದ್ದರು. ವಿಶಿಷ್ಟವಾದ ವಾಸ್ತು ಶೈಲಿಯನ್ನು ಹೊಂದಿದ್ದು, ನೋಡುವ ಸಂದರ್ಭದಲ್ಲಿ ಎಂಥವರಿಗೂ ಬೆರಗನ್ನು ಹುಟ್ಟಿಸುವ ರೂಪದಲ್ಲಿರುವಂತೆ ಮಾಡುತ್ತಿದ್ದರು. ಗುತ್ತಿನ ಚಾವಡಿಯಲ್ಲಿ ಅಂದವಾದ ಕೆತ್ತನೆಯಿಂದ ಕೂಡಿದ ದೊಡ್ಡ ಗಾತ್ರದ ಆಯದ ಬಾಗಿಲು ಇರುತ್ತದೆ. ಇತರ ಬಾಗಿಲುಗಳು ಗಿಡ್ಡದಾಗಿದ್ದು ಅದನ್ನು ದಾಟುವಾಗ ತಲೆತಗ್ಗಿಸಿಕೊಂಡು ಹೋಗಬೇಕಾಗುತ್ತದೆ. ಚಾವಡಿಯ ಕಂಬಗಳು ಬೃಹತ್ ಗಾತ್ರವಾಗಿದ್ದು ಬಗೆಬಗೆಯ ಕೆತ್ತನೆಗಳಿಂದ ಕೂಡಿರುತ್ತವೆ. ಉಪ್ಪರಿಗೆಯನ್ನು ಮರದಿಂದಲೇ ನಿರ್ಮಿಸಿರುತ್ತಾರೆ. ಕಿಟಕಿಗಳು ಕಡಿಮೆಯಾಗಿದ್ದು, ಇರುವ ಕಿಟಕಿಗಳು ಗಾತ್ರದಲ್ಲಿ ಸಣ್ಣದಿರುತ್ತವೆ. "ಗುತ್ತಿನ ಮನೆಗಳಲ್ಲಿ ಪತ್ತಾಸು, ಕಲೆಂಬಿ ಮುಂತಾದ ಮರದ ಪೆಟ್ಟಿಗೆಗಳಿರುತ್ತಿದ್ದವು. ವಯಸ್ಸಾದವರು ಕಲೆಂಬಿಯ ಮೇಲೆ ಮಲಗುತ್ತಿದ್ದರು. ಚಾವಡಿಯಲ್ಲಿ ಒಂದೇ ಒಂದು ಮರದ ಕುರ್ಚಿಯಿರುತ್ತಿತ್ತು. ಅದರಲ್ಲಿ ಮನೆಯ ಗುರಿಕಾರ ಮಾತ್ರ ಕುಳಿತುಕೊಳ್ಳಬಹುದಿತ್ತು."[೧]

ಆ ಮನೆಗಳಲ್ಲಿ ಅನೇಕ ಜನರಿರುವ ಕಾರಣದಿಂದಾಗಿ, ಅನೇಕ ಕೊಠಡಿಗಳಿರುತ್ತಿದ್ದವು. ಮನೆಯ ಎದುರಿನ ಭಾಗದಲ್ಲಿರುವ ಚಾವಡಿಯಲ್ಲಿ ದೈವದ ಉಯ್ಯಾಲೆ ಇರುತ್ತದೆ ಅಲ್ಲಿ ದೈವದ ಭಂಡಾರವಿದ್ದು, ನಿತ್ಯದ ಪೂಜೆಯನ್ನು ಗಂಡಸರೇ ಮಾಡುತ್ತಾರೆ. ಅಲ್ಲಿಗೆ ಹೆಂಗಸರಿಗೆ ಪ್ರವೇಶ ನಿಷಿದ್ಧವಾಗಿದೆ. ಗುತ್ತಿನ ಮನೆಗಳಿಗೆ ವಿಸ್ತಾರವಾದ ಕೃಷಿ ಭೂಮಿ ಇರುವ ಕಾರಣದಿಂದಾಗಿ ದೊಡ್ಡ ಅಂಗಳದ ಅಗತ್ಯವಿದೆ. ಅಡಿಕೆ ಒಣಗಿಸುವುದಕ್ಕೆ, ಭತ್ತ ಕುಟ್ಟುವುದಕ್ಕೆ, ಇನ್ನಿತರ ಕೃಷಿ ಸಂಬಂಧಿತ ಕೆಲಸಗಳಿಗೆ ಇದು ಅಗತ್ಯವಿತ್ತು. ಅಂಗಳದ ಪಕ್ಕದಲ್ಲಿ ಬೈಹುಲ್ಲಿನ ಸೂಡಿಗಳನ್ನು ಹೇರಿಡಲಾಗುತ್ತಿತ್ತು. ಭತ್ತವನ್ನು ಕುಟ್ಟಿ ಅಕ್ಕಿಯನ್ನು ಮಾಡಿ ಮುಡಿ ಕಟ್ಟಿ ಸಂರಕ್ಷಿಸುತ್ತಿದ್ದರು. ಕುಟುಂಬದ ಮೂಲ ಬೆರ್ಮೆರ್ ಮತ್ತು ಮೂಲನಾಗ ಮೂಲ ಕುಟುಂಬಕ್ಕೆ ಸಂಬಂಧಿಸಿದುದೇ ಆಗಿದೆ. ಕುಟುಂಬದ ಸದಸ್ಯರು ಎಲ್ಲಿದ್ದರೂ ಅದರ ಕಾರ್ಯಕ್ರಮಗಳಿಗೆ ತಪ್ಪದೇ ಬರುತ್ತಾರೆ. ಮನೆಯಲ್ಲಿ ಹಿಂದೆ ಸತ್ತು ಹೋದ ಹಿರಿಯರಿಗೆ ಅಗೇಲು ಬಡಿಸುವ ಕ್ರಮವು ಬಳಕೆಯಲ್ಲಿದೆ. ಅದಲ್ಲದೆ ವರ್ಷಾವಧಿ ಪರ್ವಗಳನ್ನು ಕೂಡ ಕ್ರಮವತ್ತಾಗಿ ಮಾಡುತ್ತಾ ಗುತ್ತಿನ ಗೌರವವನ್ನು ಹೆಚ್ಚಿಸುತ್ತಿದ್ದರು. ಊರಿನ ಯಾವುದೇ ಸಮಾಜದ ಕಾರ್ಯಕ್ರಮವಿರಲಿ, ಅದರಲ್ಲಿ ಗುತ್ತಿನ ಮನೆಯವರ

---

೧ ಬಿ. ಸಚ್ಚಿದಾನಂದ ಹೆಗ್ಡೆ, – ತುಳುನಾಡವರ ಸಮಾಜ – ಪು.ಸಂ. ೧೦೮

ಭಾಗವಹಿಸುವಿಕೆ ಒಂದು ಗೌರವದ ಪ್ರಶ್ನೆಯಾಗಿತ್ತು. ಇದರಿಂದಾಗಿ ಸಾಮಾಜಿಕವಾಗಿ ಎಲ್ಲಾ ವರ್ಗಗಳಿಂದಲೂ ಗೌರವವನ್ನೂ ಪಡೆಯುತ್ತಿದ್ದರು. ಸಾಮಾಜಿಕ ಆಚಾರ ವಿಚಾರಗಳನ್ನು ನಂಬಿಕೆಗಳನ್ನು ಬಲಪಡಿಸುವುದು ಅವರ ಮುಖ್ಯ ಕರ್ತವ್ಯವಾಗಿತ್ತು. ಇದರಿಂದಾಗಿ ಸಾಂಸ್ಕೃತಿಕ ಪರಂಪರೆಯನ್ನು ಉಳಿಸಿಕೊಂಡಂತೇ ಕೂಡಾ ಆಗಿಬಿಡುತ್ತದೆ. ಒಟ್ಟು ಸಮಾಜದ ಎಲ್ಲಾ ಕಾರ್ಯಗಳಲ್ಲಿಯೂ ಗುತ್ತಿನ ಮನೆಯವರು ಸಕ್ರಿಯವಾಗಿ ತೊಡಗಿಸಿಕೊಳ್ಳುತ್ತಿದ್ದರು.

ಸರ್ವಬಲವು ಗುತ್ತಿನ ಯಜಮಾನನ ಕೈಯಲ್ಲಿರುವುದರಿಂದ ಆತ ಸ್ವಾಭಾವಿಕವಾಗಿ ಪ್ರಬಲ ವ್ಯಕ್ತಿಯಾಗಿ ರೂಪುಗೊಳ್ಳುತ್ತಾನೆ. ಇದರ ಪರಿಣಾಮವಾಗಿ ಆರ್ಥಿಕವಾಗಿ ಹಿಂದುಳಿದವರು, ಕೆಳಜಾತಿಯವರು ಇವರಿಂದ ಶೋಷಣೆಗೆ ಒಳಗಾಗುತ್ತಾರೆ. ದುಡಿತಕ್ಕೆ ಸರಿಯಾದ ಪ್ರತಿಫಲ ದೊರೆಯದೆ ಮೌನವಾಗಿ ಪ್ರತಿಭಟಿಸುತ್ತಾರೆ. ತಮ್ಮ ಗೇಣಿದಾರರು ಸರಿಯಾದ ಗೇಣಿ ಕೊಡದಿದ್ದರೆ ಅವರನ್ನು ಒಕ್ಕಲೆಬ್ಬಿಸುವುದು, ಗದರಿಸುವುದು ಸಾಮಾನ್ಯವಾಗಿರುತ್ತಿತ್ತು. ಗುತ್ತಿನ ಮನೆಯ ಚಾಕರಿಯನ್ನು ಮಾಡುತ್ತಾ ಇರುವಷ್ಟು ಕಾಲ ಅವರ ಊಟದ ಮಟ್ಟಿಗೆ ಏನೂ ತೊಂದರೆಯಿಲ್ಲದೆ ಬದುಕುವವರೂ ಇದ್ದರು. ಆರ್ಥಿಕವಾಗಿ ದುರ್ಬಲರಾಗಿರುವ ತಮ್ಮ ಒಕ್ಕಲಿನ ಹೆಣ್ಣುಗಳ ಜೊತೆಗೆ ಅಕ್ರಮ ಸಂಬಂಧವೂ ಇರುತ್ತಿತ್ತು. ಇದನ್ನು ಪ್ರತಿಭಟಿಸಲು ಶಕ್ತಿ ಇಲ್ಲದೆ ಮೌನವಾಗಿ ಒಪ್ಪಿಕೊಳ್ಳುವಂತಹ ಸ್ಥಿತಿಯಲ್ಲಿ ಅವರಿದ್ದರು. ಇದರ ಪರಿಣಾಮವಾಗಿ ಗುತ್ತಿನ ಬಗ್ಗೆ ಕೆಟ್ಟ ಭಾವನೆಗಳೂ ಕೂಡಾ ಮೂಡುತ್ತದೆ. ಸಾಮಾಜಿಕವಾಗಿ ಉತ್ತಮ ಗೌರವವನ್ನು ಪಡೆದಿರುವ ಈ ಮನೆಗಳ ದುಶ್ಚಟಗಳು ಕೆಟ್ಟ ಕೆಲಸಗಳು ಹೊರಬಂದರೂ ಅದು ಮುಚ್ಚಿ ಹೋಗುತ್ತದೆ. ಅಕ್ರಮ ಸಂಬಂಧಗಳ ಪರಿಣಾಮವಾಗಿ ಗುತ್ತಿನ ಮನೆಯ ಸಂಪತ್ತು ಒಕ್ಕಲುಗಳ ಮನೆಯನ್ನು ಸೇರುವುದೂ ಇದೆ. ಮನೆಯಲ್ಲಿ ಸಿಗದ ಅಧಿಕಾರ ಮನೆಯ ಹೊರಗೆ ಸಿಗುವ ಪರಿಣಾಮವಾಗಿ ಈ ರೀತಿಯ ಕೆಲಸಗಳು ನಡೆಯಲು ಪ್ರೇರಣೆಯನ್ನು ಕೊಡುತ್ತದೆ. ಗುತ್ತು ಸೃಷ್ಟಿಮಾಡಿರುವ ಸಾಮಾಜಿಕ ವ್ಯವಸ್ಥೆ, ಜನರಲ್ಲಿ ಭಯವನ್ನು, ಗೌರವವನ್ನು ಉಂಟು ಮಾಡಿದೆ. ಇದರಿಂದಾಗಿ ಅದರ ಪ್ರಭಾವ ಹೆಚ್ಚುತ್ತಾ ಹೋಯಿತು. ಒಂದು ರೀತಿಯಲ್ಲಿ ಬಡವರ ಮೇಲೆ ತಮ್ಮ ಅಧಿಕಾರವನ್ನು ನಡೆಸಿ ಸಿಗುವ ಗೌರವದ ಅವಶ್ಯಕತೆ ಯಾಕೆ ಎಂದು ಅನಿಸಿಕೊಂಡರೂ, ಆ ಕಾಲಘಟ್ಟದ ಸಾಮಾಜಿಕ ವ್ಯವಸ್ಥೆಗೆ ಇದು ಹೊಂದಿಕೆಯಾಗಿತ್ತು. ತುಳುನಾಡಿನ ಶ್ರೀಮಂತರಾಗಿರುವ, ಅಧಿಕಾರವನ್ನು ನಡೆಸುವ ಒಂದು ಸಂಸ್ಕೃತಿಯೆಂದರೆ ಅದು ಗುತ್ತು ಸಂಸ್ಕೃತಿಯಾಗಿದೆ.

*****

# ಅಧ್ಯಾಯ – ೪

# ಗುತ್ತು ಸಂಸ್ಕೃತಿಯ ವೈಶಿಷ್ಟ್ಯ

## ೪.೧: ಸಾಮಾಜಿಕ ಸ್ಥಾನಮಾನ ಹಾಗೂ ಆಚರಣೆಗಳು

'ಗುತ್ತು' ಎನ್ನುವುದು ಕೇವಲ ಒಂದು ಕೌಟುಂಬಿಕ ವ್ಯವಸ್ಥೆಯಾಗಿ ಉಳಿದಿಲ್ಲ. ಅದು ಸಾಮಾಜಿಕ, ಧಾರ್ಮಿಕ ಹಾಗೂ ರಾಜಕೀಯ ಚಟುವಟಿಕೆಗಳ ಕೇಂದ್ರಸ್ಥಾನವೂ ಹೌದು. ತುಳುವ ಮಣ್ಣಿನ ಗುತ್ತು ಸಂಸ್ಕೃತಿಯ ಪರಿಮಳವನ್ನು ಈ ಕಾದಂಬರಿ ಕಟ್ಟಿಕೊಂಡಿದೆ. ಆ ಕಾಲ ಮತ್ತು ಈ ಕಾಲ ಎನ್ನುವ ವಿಭಾಗಗಳ ಮೂಲಕ ಹರಿದು ಬರುವ ಈ ಕಾದಂಬರಿಯಲ್ಲಿ ಸಂಸ್ಕೃತಿಯ ಪ್ರತಿನಿಧೀಕರಣವು ಸಾಕ್ಷಾತ್ಕಾರಗೊಳ್ಳುತ್ತದೆ. ಸಂಸ್ಕೃತಿಯ ಮೂಲದ ತತ್ವಗಳಿಗೆ ಆಧುನೀಕರಣದ ಪ್ರಭಾವವು ಬೀರುವ ಪರಿಣಾಮವು ಕಾದಂಬರಿಯಲ್ಲಿ ವ್ಯಕ್ತಗೊಳ್ಳುತ್ತದೆ. ಪ್ರತಿಯೊಂದು ವಿಷಯಗಳಲ್ಲಿಯೂ ಆಧುನಿಕತೆಯ ಪ್ರವೇಶ ಪಡೆದು ನಂಬಿಕೆಯನ್ನು ಪ್ರಶ್ನೆಮಾಡುವ ಸ್ಥಿತಿಯು ಬಂದುಬಿಟ್ಟಿದೆ. ಇದು ಸಂಸ್ಕೃತಿಯ ಮೇಲೆ ಗಾಢ ಪರಿಣಾಮವನ್ನುಂಟುಮಾಡುತ್ತದೆ. ಆದರೆ ಕಾದಂಬರಿಯಲ್ಲಿ ಅಂತಹ ಸಂಸ್ಕೃತಿಯನ್ನು ನಂಬಲರ್ಹ ವಿಷಯವನ್ನಾಗಿ ಚಿತ್ರಿಸಿದ್ದಾರೆ. ಸಮಾಜದ ಆಚಾರ-ವಿಚಾರಗಳನ್ನು ತಿಳಿಯಪಡಿಸುತ್ತಾ ತುಳು ಸಂಸ್ಕೃತಿ ಮತ್ತು ಗುತ್ತು ಸಂಸ್ಕೃತಿ ಒಂದೇ ಎನ್ನುವಂತೆ ಮಾಡಿಬಿಡುತ್ತದೆ. ಒಟ್ಟು ಕಾದಂಬರಿಯಲ್ಲಿ ಗುತ್ತು ಸಂಸ್ಕೃತಿಯ ಪ್ರತಿನಿಧೀಕರಣವು ವೈಶಿಷ್ಟ್ಯಪೂರ್ಣವಾಗಿ ಮೂಡಿಬಂದಿದೆ.

ಸಾಮಾಜಿಕವಾಗಿ ನೋಡುವ ಮಟ್ಟಿಗೆ ಗುತ್ತಿನ ಮನೆಯ ಮನೆಯೊಳಗಿನ ಅಧಿಕಾರ ಮನೆಯೊಡತಿಯ ಕೈಯಲ್ಲಿರುತ್ತದೆ. ಮಾತೃಪ್ರಧಾನ ವ್ಯವಸ್ಥೆಯುಳ್ಳ ಈ ಜನರಲ್ಲಿ ಗುತ್ತಿನೊಡತಿಯರ ದರ್ಪದ ಚಿತ್ರಣ ಕಾಣಸಿಗುತ್ತದೆ. ಕಾದಂಬರಿಯ ಹೆಸರನ್ನು ಗಮನಿಸಿದ ಸಂದರ್ಭದಲ್ಲಿಯೇ ಮಹಿಳೆಯ ಅಧಿಕಾರದ ಚಿತ್ರಣ ವ್ಯಕ್ತಗೊಳ್ಳುತ್ತದೆ. ಮುನ್ನುಡಿಯಲ್ಲಿ ಡಾ। ಎಚ್. ನಾಗವೇಣಿಯವರು ತಿಳಿಸಿದಂತೆ ಗುತ್ತಿನೊಡತಿಯರ ಪಕ್ಷಪಾತೀಯ ಕಾರುಬಾರಿನಲ್ಲಿ ನರಳುವ ಅಥವಾ ಅರಳುವ ಅವರ ಒಟಹುಟ್ಟಿದವರ ನೋವು-ನಲಿವುಗಳು ಸಾಮಾನ್ಯ. "ಯಜಮಾನಿಕೆ ವಹಿಸುವವನ್ನು ಕಾಯುತ್ತಾ ಕುಳಿತರೆ ಮನೆಯ ಆಡಳಿತ, ಕೃಷಿ, ಬೇಸಾಯ ಹೇಗೆ ನಡೆಯುವುದು? ಅದು ನಿಲ್ಲುವುದಿಲ್ಲ. ಅದನ್ನೆಲ್ಲ ಗುತ್ತಿನ ಯಜಮಾನತಿ ಕೈಗೆ ತೆಗೆದುಕೊಂಡು ನಡೆಸುತ್ತಿದ್ದರು. ಸಾಮಾನ್ಯವಾಗಿ ಅಳಿಯ ಸಂತಾನದ ಬಂಟರ ಮನೆಯಲ್ಲಿ ಹೆಚ್ಚಾಗಿ

ಯಜಮಾನಿಕೆಯ ಕಾರುಬಾರು ಕುಟುಂಬದ ಹಿರಿಯಾಕೆಯ ಒಪ್ಪಿಗೆಯಲ್ಲೇ ನಡೆಯಬೇಕು. ಯಜಮಾನತನಕ್ಕೆ ಹೊರಗಿನ ಮುಖ ಗಂಡಿನದು, ಒಳಗಿನ ಕಾರುಬಾರು ಹೆಣ್ಣಿನದು. ಮನೆಯ ಹಿರಿಯ ಮಹಿಳೆಯ ಒಪ್ಪಿಗೆಯಲ್ಲೇ ಯಜಮಾನ ಆಡಳಿತ ನಡೆಸಬೇಕು.[೧] ಗೆಜ್ಜೆಕತ್ತಿಯನ್ನು ಹುಟ್ಟಿನಿಂದ ಸಾವಿನವರೆಗೆ ಧರಿಸಿ ಕುಟುಂಬದ ಹಿತಾಸಕ್ತಿಯನ್ನು ಕಾಪಾಡುವರು. ಗುತ್ತಿನ ಗೌರವಕ್ಕಾಗಿ, ಏಳಿಗೆಗಾಗಿ ಅವರು ಯಾವುದೇ ಕೆಲಸವನ್ನು ಮಾಡಬಲ್ಲರು. ಮನೆಯೊಡತಿಯ ಮಾತನ್ನು ಎಂತಹ ಪರಾಕ್ರಮಶಾಲಿಯಾದರೂ ಮೀರುತ್ತಿರಲಿಲ್ಲ. ಇದರಿಂದಾಗಿ ಮನೆತನದ ಗೌರವಕ್ಕೆ ಯಾವುದೇ ಕುಂದುಬರುವುದಿಲ್ಲ. ಕಾದಂಬರಿಯಲ್ಲಿಯೂ ಯಜಮಾನಿಕೆಯ ಪಾತ್ರದ ಮೂಲಕ ಇದು ಸ್ಪಷ್ಟಗೊಳ್ಳುತ್ತದೆ. ಇದರ ಪರಿಣಾಮವಾಗಿ ಕುಟುಂಬದ ಕಿರಿಯರು ತಮ್ಮ ಆಸೆ, ಬಯಕೆಗಳನ್ನು ಪೂರ್ಣಗೊಳಿಸುವಲ್ಲಿ ವಿಫಲರಾಗಿರುತ್ತಾರೆ. ಯಮುನಕ್ಕ ಮಿತ್ತಬೈಲನ್ನು ಬೆಳಗುವಲ್ಲಿ ಬಹಳ ಪ್ರಮುಖ ಪಾತ್ರವಹಿಸುತ್ತಾರೆ. ಮನೆಯ ಎಲ್ಲಾ ಸದಸ್ಯರನ್ನು ಒಂದೇ ರೀತಿಯಲ್ಲಿ ನೋಡಿ ಅವರವರ ಯೋಗ್ಯತೆಗೆ ಅನುಗುಣವಾಗಿ ಗೌರವ ಪ್ರೀತಿಯನ್ನು ತೋರಿಸುತ್ತಿದ್ದರು. ಕಣ್ಣುಗಳಲ್ಲಿ ಪ್ರೀತಿಯ ಜೊತೆ ಕ್ರೌರ್ಯವೂ ನಲಿಯುತ್ತಿತ್ತು. ಕಿರಿಯರು ಯಾರೂ ಕೂಡ ಅವರ ಜೊತೆ ಕುಳಿತು ಮಾತನಾಡುವ ಆಗಿಲ್ಲ. ಇದು ಗುತ್ತಿನ ಅಧಿಕಾರಕ್ಕೆ ಹಿರಿತನಕ್ಕೆ ಕೊಡುವ ಗೌರವ. ಗುತ್ತಿನ ಗೌರವಕ್ಕಾಗಿ ಅವರು ಕ್ಷಾತ್ರ ಪ್ರವೃತ್ತಿಯನ್ನು ತೋರಿಸಬಲ್ಲರು. ಅಧಿಕಾರದ ಬಲದಿಂದ ಅವರು ಯಾವ ಕೆಲಸವನ್ನು ಬೇಕಾದರೂ ಮಾಡುತ್ತಾರೆ. ಮಂಜೇಶ್ವರ-ಪುತ್ತೂರು ಬಸ್ಸಿನ ಸಂದರ್ಭದಲ್ಲಿ ಈ ಮಾತು ಸ್ಪಷ್ಟಗೊಳ್ಳುತ್ತದೆ. ಇಲ್ಲಿ ಬಸ್ಸಿಗಾಗಿ ಜನ ಕಾಯುವುದಿಲ್ಲ, ಜನರಿಗಾಗಿ ಬಸ್ಸು ಕಾಯುವುದು ಎನ್ನುವಂತಿದೆ. ಯಮುನಕ್ಕ ಬಸ್ಸಲಿ ಬರುವುದೆಂದರೆ ಅವರಿಗಾಗಿ ಬಸ್ಸು ಕಾಯಬೇಕು. ಅವರಿಗಾಗಿ ಮೀಸಲಾಗಿರುವ ಕುರ್ಚಿಯ ಎದುರುಗಡೆ ಯಾರೂ ಸುಳಿಯಬಾರದು. ಬಸ್ಸು ನಿಲ್ಲಿಸದಿದ್ದುದಕ್ಕೆ ತನ್ನ ಅಧಿಕಾರದ ಬಲದಿಂದ ಚಾಲಕನಿಗೆ ಹೊಡೆದು ಅಂಗಳದ ಚಪ್ಪರದ ಕಂಬಕ್ಕೆ ಕಟ್ಟಿಹಾಕಿಸುತ್ತಾರೆ. ಇದನ್ನು ಪ್ರಶ್ನಿಸುವ ಧೈರ್ಯ ಯಾರಲ್ಲೂ ಇರಲಿಲ್ಲ. ತಮ್ಮ ಸಾಮರ್ಥ್ಯದಿಂದ ಗುತ್ತಿನ ಮನೆಯವರು ಏನನ್ನು ಬೇಕಾದರೂ ಮಾಡಬಲ್ಲರು ದುರ್ಬಲ ಕೆಳಜಾತಿಯವರು ಇದರ ಬಗ್ಗೆ ಪ್ರಶ್ನಿಸುವಂತಿಲ್ಲ. ಕಾದಂಬರಿಯಲ್ಲಿ ಬಸ್ಸಿನ ಚಿತ್ರಣದ ಮೂಲಕ ವ್ಯಕ್ತಗೊಳ್ಳುವ ಅಂಶವು ವಾಸ್ತವದಲ್ಲಿ ಬೇರೆಬೇರೆ ರೀತಿಯಲ್ಲಿ ನಡೆಯಬಹುದು. ತಮ್ಮ ಅಧಿಕಾರ ಗೌರವವನ್ನು ಮಾತ್ರ ಕಲ್ಪಿಸಿಕೊಂಡು ಆ ರೀತಿಯ ದರ್ಪವನ್ನು ಮೆರೆಯುತ್ತಿದ್ದರು. ಇದರಿಂದಾಗಿ ಅಮಾಯಕರು ಗುತ್ತಿನ ಕೋಪಕ್ಕೆ ಬಲಿಯಾಗುವುದು ಸಾಮಾನ್ಯವಾಗಿತ್ತು. ಗುತ್ತಿನ ಒಡೆತನಕ್ಕೆ ವೈರಿಗಳಿದ್ದರೆ ಅವರನ್ನು ಕೂಡಾ

---

೧ ಮಹಮ್ಮದ್ ಕುಳಾಯಿ – ಮಿತ್ತಬೈಲ್ ಯಮುನಕ್ಕ – ಪು.ಸಂ. ೧೯

ಕೊನೆಗೊಳಿಸಲು ಹಿಂಜರಿಯುವ ಸ್ವಭಾವ ಅವರದಲ್ಲ. ಬಾರೆಬೈಲ್‌ನ ಮನೆಗೆ ಬೆಂಕಿಯನ್ನು ಹಚ್ಚಿ ತಮ್ಮ ವೈರಿಗಳನ್ನು ಕೊಂದುಬಿಡುತ್ತಾರೆ. ಯಮುನಕ್ಕನೇ ತನ್ನ ವೈರಿ ತ್ಯಾಂಪಣ್ಣನನ್ನು ಕೊಲ್ಲಲು ಹಿಡಿಯುತ್ತಾರೆ. ಅಲ್ಲೊಂದು ಸಂಸಾರವಿತ್ತು ಎನ್ನುವ ಯಾವುದೇ ಕುರುಹುಗಳು ಕಾಣಿಸದಂತೆ ಮನೆಯನ್ನು ತೆಗೆಸಿಬಿಡುತ್ತಾರೆ. ಗುತ್ತಿನ ಗೌರವಕ್ಕಾಗಿ ಸಾವು ನೋವು ಯಾವುದನ್ನೂ ಲೆಕ್ಕಿಸುವುದಿಲ್ಲ ಈ ರೀತಿಯ ವೀರತ್ವದ ಸೇಡಿನ ಲಕ್ಷಣಗಳನ್ನು ಗುತ್ತು ಪಡೆದಿತ್ತು.

ಗುತ್ತಿನ ವ್ಯಾಪ್ತಿಗೆ ಬರುವ ಯಾವುದೇ ಕಾರ್ಯಕ್ರಮಗಳಲ್ಲಿ ಅವರ ಭಾಗವಹಿಸುವಿಕೆ ಮುಖ್ಯವಾಗಿತ್ತು. ಇದೊಂದು ಅವರ ಅಧಿಕಾರದ ಮತ್ತು ಗೌರವದ ಪ್ರಶ್ನೆ, ಊರಿನ ಜಾತ್ರೆ, ಭೂತ ಇತ್ಯಾದಿ ಕಾರ್ಯಕ್ರಮಗಳಿಗೆ ಅವರಿಗೆ ಪ್ರತ್ಯೇಕವಾದ ಆಹ್ವಾನವಿದೆ. ಗುತ್ತಿನಲ್ಲಿ ನಡೆಯುವ ನಿಶ್ಚಿತಾರ್ಥ ಹಾಗೂ ಮದುವೆಯೂ ವಿಶಿಷ್ಟ ಸಾಂಸ್ಕೃತಿಕ ಅಂಶವನ್ನು ಒಳಗೊಂದಿದೆ. ನಿಶ್ಚಿತಾರ್ಥದ ದಿವಸ ಜನಪದ ಕ್ರೀಡೆಯಾದ ಕೋಳಿ ಅಂಕವು ವಿಶೇಷ. ನಿಶ್ಚಿತಾರ್ಥಕ್ಕೆ ಬರುವವರಿಗೆ ಕೋಳಿಯ ಗಸಿ, ಸಾರು ಮಾಡಲು ಈ ರೀತಿಯ ಕ್ರಮವನ್ನು ಅನುಸರಿಸುತ್ತಿದ್ದರು. ಆದ್ದರಿಂದ ಬೀಗರೆಲ್ಲ ಕೋಳಿಅಂಕಕ್ಕೆ ಕೋಳಿಯ ಸಮೇತ ಬರುತ್ತಾರೆ. ಅಂಕದಲ್ಲಿ ಸಿಕ್ಕಿದ ಕೋಳಿಯನ್ನೆಲ್ಲಾ ಅಂದಿನ ಕಾರ್ಯಕ್ರಮದ ಅಡುಗೆಗಾಗಿ ಉಪಯೋಗಿಸುತ್ತಾರೆ. ಇದು ಗುತ್ತಿನ ಮನೆಯವರ ಒಂದು ವಿಶೇಷವಾದ ಸಂಸ್ಕೃತಿ. ಬಂದಿರುವ ಹಿರಿಯರಲ್ಲಿ ಒಬ್ಬರು ಅಂದಿನ ನಿಶ್ಚಿತಾರ್ಥದ ಕಾರ್ಯಕ್ರಮದ ಬಗ್ಗೆ ತಿಳಿಸಿ, ಇಂಥವರು ಮದುವೆಯನ್ನು ಮಾಡಿಕೊಳ್ಳಲು ಒಪ್ಪಿಕೊಂಡಿದ್ದಾರೆ. ಇದಕ್ಕೆ ಯಾರದೂ ಅಡ್ಡಿ ಇಲ್ಲದಿದ್ದರೆ ಸರ್ವರ ಒಪ್ಪಿಗೆಯಲ್ಲಿ ತಾಂಬೂಲ ಬದಲಾಯಿಸಿ ನಿಶ್ಚಿತಾರ್ಥ ಮಾಡಿಕೊಳ್ಳುತ್ತೇವೆ. ಸರ್ವರ ಒಪ್ಪಿಗೆ ಇದೆಯೋ ಎಂದು ಕೇಳುತ್ತಾರೆ. ಅಂದಿನ ಕಾಲದಲ್ಲಿ ಒಪ್ಪಿಗೆ ಕೇಳುವ ಅವಶ್ಯಕತೆಯಿತ್ತು. ಕೆಲವು ಸಂದರ್ಭದಲ್ಲಿ ತಂದೆ-ತಾಯಿ, ತಂಗಿ, ಅಣ್ಣನ ಮಕ್ಕಳಿಗೆ ಮದುವೆ ಮಾಡಿಕೊಡುತ್ತೇವೆ ಎಂದು ಭಾಷೆ ಕೊಟ್ಟಿರುತ್ತಾರೆ ಅಥವಾ ತೊಟ್ಟಿಲ ಮದುವೆ ನಡೆದಿರುತ್ತದೆ. ಆದಕ್ಕಾಗಿ ಈ ರೀತಿಯಾಗಿ ಕೇಳಿ ಒಪ್ಪಿಗೆಯನ್ನು ಪಡೆಯುತ್ತಾರೆ. ಒಟ್ಟು ಮದುವೆಯ ಬಗ್ಗೆ ಸಂಪೂರ್ಣ ಅಧಿಕಾರ ಹಿರಿಯರಿಗೆ ಇರುತ್ತದೆ. ಹೆಣ್ಣಿಗೆ ಹುಡುಗನ ಬಗೆಗಿನ ಅಭಿಪ್ರಾಯವನ್ನು ಕೇಳುವ ಕ್ರಮವಿರಲಿಲ್ಲ. ಅಳಿಯ ಸಂತಾನ ಕಟ್ಟಿನ ಪ್ರಕಾರ ಗಂಡು ಹೆಣ್ಣಿನ ಹಿರಿಯರಾದ ಅತ್ತೆ, ಮಾವಂದಿರು ನಿಶ್ಚಯ, ಮದುವೆಯ ಹೊಣೆಗಾರಿಕೆಯನ್ನು ಪಡೆದಿರುತ್ತಾರೆ. ಎಲ್ಲಾ ಕಾರ್ಯಗಳು ಹಿರಿಯರ ಒಪ್ಪಿಗೆಯ ಮೂಲಕವೇ ನಡೆಯುತ್ತಿತ್ತು. ಗುತ್ತಿನವರ ಮದುವೆಯೂ ಕೂಡ ಒಂದು ದಿವಸದ ಕಾರ್ಯಕ್ರಮವಲ್ಲ. ಸುಮಾರು ಆರೇಳು ದಿನಗಳವರೆಗೆ ನಡೆಯುತ್ತಿತ್ತು. ವರನ ಮನೆಯಲ್ಲೇ ವಿವಾಹ ನಡೆಯುವ ಸಂಪ್ರದಾಯವಿತ್ತು. ಮದುವೆಯ ಚಪ್ಪರವನ್ನು ಹಾಕಲು ತಂತ್ರಿಗಳು

ಒಂದು ಪೂಜೆಯನ್ನು ಮಾಡುತ್ತಾರೆ. ಕಾಡಿನಿಂದ ಕಂಬ, ಬಿದಿರು, ಸಲಾಕೆ ತಂದು ಸೋಗೆಯ ಚಪ್ಪರವನ್ನು ತಿಂಗಳಾಗುವುದರೊಳಗೆ ಸಿದ್ಧಪಡಿಸುತ್ತಾರೆ. ಮದುವೆಯ ಬಟ್ಟೆಗಾಗಿ ನೇಕಾರರನ್ನು ಮನೆಗೆ ಕರೆಯಿಸಿ ಬಟ್ಟೆಗಳನ್ನು ನೇಯಿಸುತ್ತಿದ್ದರು. ಅಕ್ಕಸಾಲಿಗರನ್ನು ಕರೆಯಿಸಿ ಆಭರಣಗಳನ್ನು ತಯಾರಿಸುತ್ತಿದ್ದರು. ಮದುವೆಯ ದಿನದಂದು ಮುಹೂರ್ತದ ಕಂಬ ನೆಡುವ ಕ್ರಮವಿದೆ. ಹಾಲು ಹೊಯ್ದು, ಚಿನ್ನದ ಚೂರು ಹಾಕಿ ಹಾಲೆಯ ಮರದ ಕಂಬವನ್ನು ನಿಲ್ಲಿಸುತ್ತಾರೆ. ಇದೊಂದು ಶುಭ ಸೂಚಕ. ಈ ಕ್ರಮಗಳು ನಡೆಯುವಾಗ ಕೊಂಬುವಾದ್ಯವು ಮೊಳಗುತ್ತದೆ. ಮಡಿವಾಳರ ಜವಾಬ್ದಾರಿ ಅಲ್ಲಿ ಮುಖ್ಯವಾಗಿರುತ್ತದೆ. ಅವರು ಮುಹೂರ್ತದ ಕಂಬಕ್ಕೆ ಬಟ್ಟೆ ಸುತ್ತಿ, ಮಡಿ ಬಟ್ಟೆ ಕಟ್ಟಿ ಧಾರೆ ಮಂಟಪವನ್ನು ಅಲಂಕರಿಸುತ್ತಿದ್ದರು. ಬ್ಯಾಂಡ್, ಕೊಂಬಿನ ವಾದ್ಯಗಳ ಮೂಲಕ ಬರುವ ಮದುವೆ ದಿಬ್ಬಣವನ್ನು ಗುತ್ತಿನ ಯಜಮಾನ ಸ್ವಾಗತಿಸುತ್ತಾನೆ. ಮದುವೆಗೆ ಬರುವ ಎಲ್ಲಾ ಗುತ್ತಿನ ಮನೆಯವರು, ಬ್ರಾಹ್ಮಣರು ಹಾಗೂ ಎಲ್ಲಾ ಸಮಾಜದ ಜನರು ಅವರವರಿಗೆ ಮೀಸಲಾಗಿರುವ ಸ್ಥಳದಲ್ಲಿ ಕುಳಿತುಕೊಳ್ಳುತ್ತಾರೆ. ಗುತ್ತಿನ ಮನೆಯ ಕೆಳಗಿನ ಗದ್ದೆಯಲ್ಲಿ ಆಗ ಯುವಕರ ತಾಲೀಮು ಪ್ರದರ್ಶನವಾಗುತ್ತದೆ. ಮಡಿವಾಳ ಹಾಕಿದ ಮಡಿಬಟ್ಟೆಯಲ್ಲಿ ವಧುವರರನ್ನು ನಿಲ್ಲಿಸಿ, ಗುತ್ತಿನ ಹಿರಿಯರು ಸಭೆಗೆ ಕೈಮುಗಿದು ದೈವದೇವರನ್ನು ಪ್ರಾರ್ಥಿಸಿ ಧಾರೆ ಎರೆಯಲು ಅಪ್ಪಣೆ ಕೇಳುತ್ತಾರೆ. ಧಾರೆ ಎರೆಯುವ ಅಧಿಕಾರವನ್ನು ಮಾವಂದಿರು ಪಡೆದಿರುತ್ತಾರೆ. ಉಡುಗೊರೆ ಕೊಡುವ ಪದ್ಧತಿಯು ಗುತ್ತಿನವರಲ್ಲಿದೆ. ಉಡುಗೊರೆ ಹಾಕುವ ಕಂಚಿನ ಹರಿವಾಣವನ್ನು ಗುತ್ತಿನ ಮುಖಂಡರು ಸಭೆಯ ಅಪ್ಪಣೆ ಪಡೆದು ಇರುತ್ತಾರೆ. ವಧುವರರಿಗೆ ಅಕ್ಷತೆಯನ್ನು ಹಾಕಿ ಹರಿವಾಣದಲ್ಲಿ ಉಡುಗೊರೆಯನ್ನು ಹಾಕುತ್ತಾರೆ. ಒಬ್ಬ ಹಿರಿಯ ವ್ಯಕ್ತಿ ಉಡುಗೊರೆ ಹಾಕಿದವರ ಹೆಸರನ್ನು ಕರೆದು ಹೇಳುತ್ತಾರೆ. ಮದುವೆಗೆ ಬಂದಿರುವ ಅತಿಥಿಗಳು, ಹಿರಿಯರು ಊಟವನ್ನು ಮಾಡಿಮುಗಿಯುವ ಹೊತ್ತಿಗೆ, ಮದುಮಕ್ಕಳನ್ನು ಚಪ್ಪರದಿಂದ ಇಳಿಸಿಕೊಡುತ್ತಾರೆ. ಹಿರಿಯರ ಪಾದಮುಟ್ಟಿ ಆಶೀರ್ವಾದವನ್ನು ಪಡೆಯುವುದರ ಮೂಲಕ ವಿವಾಹದ ಕ್ರಮಗಳು ಕೊನೆಗೊಳ್ಳುತ್ತವೆ. ಇಂದು ಈ ರೀತಿಯ ವಾರಗಟ್ಟಲೆಯ ಮದುವೆಯು ಆರ್ಥಿಕ ವ್ಯಯ ಎನ್ನುವ ಕಾರಣದಿಂದ ಸರಳವಾಗಿ ನಡೆಯುತ್ತದೆ.

ಹಬ್ಬಗಳಲ್ಲಿ ಸೌರಮಾನ ಯುಗಾದಿ (ವಿಷು)ಯ ಆಚರಣೆ ಗುತ್ತಿನ ಮನೆಗಳಲ್ಲಿ ವಿಶೇಷ. ತುಳುನಾಡಿನ ಕೃಷಿ ಸಂಸ್ಕೃತಿಯ ಪ್ರತೀಕವಾಗಿ ಈ ಹಬ್ಬ ನಡೆಯುತ್ತದೆ. ಅಂದು ಬೆಳಗ್ಗೆ ಎದ್ದು ಮನೆಯ ಸದಸ್ಯರೆಲ್ಲ ಹೊಳೆ ಕೆರೆಗಳಿಗೆ ಹೋಗಿ ಸ್ನಾನಮಾಡಿ ಹೊಸಬಟ್ಟೆಯನ್ನು ತೊಟ್ಟುಕೊಂಡು ಚಾವಡಿಯ ಹೊರಗೆ ಸೇರುತ್ತಾರೆ. ಗುತ್ತಿನ ಯಜಮಾನರು ಗುಂಡದ ಮಂಚದಲ್ಲಿದ್ದ ದೈವದ ಮುಖವಾಡ, ಗಂಟೆ, ಕಡ್ತಲೆಗಳನ್ನು ಹೂ, ಪಿಂಗಾರಗಳಿಂದ ಅಲಂಕರಿಸಿ ಗಂಧದ ಧೂಪ ಕೊಡುತ್ತಾರೆ. ಅಲ್ಲಿಂದ ಬಂದು

ಚಾವಡಿಯಲ್ಲಿ ವಿಷುಕಣಿಯನ್ನು ಇಡುತ್ತಾರೆ. ಅಂದು ಗದ್ದೆಯನ್ನು ಎರಡು ಸಾಲು ಉಳುವ ಕ್ರಮವಿದೆ. ಅದಕ್ಕಾಗಿ ಕೋಣಗಳನ್ನು ಅಲಂಕರಿಸಿ, ಗದ್ದೆಯನ್ನು ಉಳುತ್ತಾರೆ. ಭೂತದ ಕೊಟ್ಟಿಗೆಯ ಎದುರು ಎಲ್ಲಾ ತರಕಾರಿಗಳು, ಚಿನ್ನ, ಹಣ, ತಂಬಿಗೆಯಲ್ಲಿ ನೀರು, ಅದರ ಮೇಲೆ ಒಂದು ಹೊಸಬಟ್ಟೆ, ತುದಿ ಎಲೆಯಲ್ಲಿ ಒಂದು ಬಳ್ಳ ಬೆಳ್ತಿಗೆ ಅಕ್ಕಿ, ಬದಿಯಲ್ಲಿ ತೆಂಗಿನಕಾಯಿ, ಅಡಿಕೆ, ಮಲ್ಲಿಗೆಯ ಮಾಲೆ, ಕಲಶಕನ್ನಡಿ ಇಟ್ಟು ಗುತ್ತಿನ ಮನೆಯ ಯಜಮಾನರು ಕಣಿಗೆ ಅಡ್ಡ ಬೀಳುತ್ತಾರೆ. ಒಕ್ಕಲಿನವರು ಧನಿಯ ಮನೆಯ ಕಣಿಯ ಸಂಪತ್ತು ಸೌಭಾಗ್ಯಕ್ಕೆ ಅಡ್ಡಬಿದ್ದು, ಅವರ ಭಾಗ್ಯ ಹೆಚ್ಚಾಗಲೆಂದು ಕೈಮುಗಿಯುತ್ತಾರೆ ಹಾಗೂ ಹೊರಗೆ ಚಪ್ಪರದಲ್ಲಿ ಬೆಳೆಕಾಣಿಕೆ ಇಟ್ಟು ಸಂಸಾರ ಸಮೇತ ದೈವಕ್ಕೆ ಕೈಮುಗಿದು ಗುತ್ತಿನವರ ಕಾಲಿಗೆ ಬೀಳುತ್ತಾರೆ. ಬೆಳೆಕಾಣಿಕೆ ಅವರ ಕಸುಬಿನ ಕಾಣಿಕೆಯಾಗಿರುತ್ತದೆ. ಯಜಮಾನರು ಅವರಲ್ಲಿ ಮಾತನಾಡಿಸಿ ಅವರನ್ನು ಕೊಟ್ಟಾರಿಯ ಬಳಿ ಕಳುಹಿಸುತ್ತಾರೆ. ಹೊಸ ಗೇಣಿ ಚೀಟಿಯನ್ನು ಮಾಡುವುದು ಕೂಡ ಅದೇ ದಿವಸ. ಅದೆಲ್ಲವೂ ಆದ ಮೇಲೆ ಅಂದು ಗುತ್ತಿನ ಮನೆಯಲ್ಲಿಯೇ ಊಟ. ಸಾಮಾನ್ಯವಾಗಿ ಅಂದು ತರಕಾರಿಯ ವಿಶೇಷ ಅಡುಗೆ, ಪಾಯಸವನ್ನು ಮಾಡಿ, ಬಂದಿರುವ ಬಂಧುಗಳಿಗೆ, ಒಕ್ಕಲಿನವರಿಗೆ ಬಡಿಸುತ್ತಾರೆ. ಒಕ್ಕಲಿನವರಿಗೆ ಅಂದು ಧನಿಯು ಹಣ ಅಥವಾ ಬಟ್ಟೆಯನ್ನು ಉಡುಗೊರೆಯಾಗಿ ಕೊಡುವ ಕ್ರಮವಿದೆ. ಈ ಒಂದು ಹಬ್ಬವನ್ನು ಗುತ್ತಿಗೆ ಸಂಬಂಧಿಸಿದ ಎಲ್ಲಾ ಒಕ್ಕಲಿನವರು ಸಂಸಾರ ಸಮೇತ ಗುತ್ತಿನ ಮನೆಗೆ ಬಂದು ಆಚರಿಸುತ್ತಾರೆ.

ಗುತ್ತಿನ ಮನೆಯ ಇನ್ನೊಂದು ಆಚರಣೆ – 'ಪುದ್ವಾರ್' ಅಥವಾ 'ಹೊಸಅಕ್ಕಿಊಟ'. ಇದು ಕೂಡ ಗುತ್ತಿನ ಮನೆಯಲ್ಲಿ ಒಕ್ಕಲಿನವರು ಎಲ್ಲಾ ಸೇರಿ ಮಾಡುವ ಒಂದು ಆಚರಣೆ. ಗುತ್ತಿನ ವಿಶಾಲವಾದ ಗದ್ದೆಯ ಸಾಗುವಳಿಯ ಕೊನೆಯ ದಿನ ಇದನ್ನು ಆಚರಿಸುತ್ತಾರೆ. ಅಂದು ಗದ್ದೆ ಹದ ಮಾಡುವ ಕಂಬಳವೂ ನಡೆಯುತ್ತದೆ. ಬೇಸಾಯ ಮುಗಿದ ಸಂತೋಷವನ್ನು ಊರಿನವರ ಜೊತೆ ಮನೆಯವರೆಲ್ಲ ಸೇರಿ ಹಂಚಿಕೊಳ್ಳುವ ಒಂದು ಆಚರಣೆ. ಮನೆಯ ಹತ್ತಿರದ ಗದ್ದೆಯನ್ನು (ಬಾಕಿಮಾರು) ಹದಗೊಳಿಸಿ ಗದ್ದೆಯಲ್ಲಿ ಏಳು ಅಂತಸ್ತಿನ ಪೂಕರೆ ನೆಟ್ಟು ಮೂರು ಮುಡಿ ಭತ್ತದ ಗದ್ದೆಯ ಕೆಲಸ ಮುಗಿಯುವಾಗ ಮಧ್ಯಾಹ್ನದ ಹೊಸಅಕ್ಕಿ ಊಟ ತಯಾರಾಗಬೇಕು. ಕಂಬಳದ ಗದ್ದೆಗೆ ಕೋಣಗಳನ್ನು ಇಳಿಸಿದವರಿಗೆಲ್ಲ ಗುತ್ತಿನ ಮನೆಯಲ್ಲಿಯೇ ಊಟ. ಒಕ್ಕಲು ಮನೆಗಳ ಗಂಡಸರು, ಹೆಂಗಸರು, ಮಕ್ಕಳು, ಮೂಲದ ಮುಗೇರರ ಸಂಸಾರವೆಲ್ಲವೂ ಅಂದು ಗುತ್ತಿನ ಮನೆಗೆ ಬಂದು ಹೊಸ ಅಕ್ಕಿಯ ಊಟ ಮಾಡಬೇಕು. ಅಂದು ಊಟಕ್ಕಾಗಿ ಮಸ್ಕತ್ ಅಕ್ಕಿಯನ್ನು, ಹೊಸ ಅಕ್ಕಿಯ ಪಾಯಸಕ್ಕಾಗಿ ಗಂಧಸಾಲೆ ಅಕ್ಕಿಯನ್ನು ಬಳಸುತ್ತಿದ್ದರು. ಮಧ್ಯಾಹ್ನದ ಊಟಕ್ಕೆ ಸಸ್ಯಹಾರವನ್ನು ಬಳಸುವುದು ಹಾಗೂ ರಾತ್ರಿಯ ಮರು

ಪುದ್ವಾರ್‌ಗೆ ಮೀನು ಮತ್ತು ಕೋಳಿ ಮಾಂಸದ ಊಟ ನಡೆಯುವುದು ಕ್ರಮ. ಸಾಮಾನ್ಯವಾಗಿ ಕೆಲವು ಕಡೆಗಳಲ್ಲಿ ಹೊಸ ಬೆಳೆ ಬಂದು ತಕ್ಷಣ ಹೊಸ ಅಕ್ಕಿಯ ಊಟವನ್ನು ಮಾಡುವ ಕ್ರಮವಿದೆ. ಆದರೆ ಗುತ್ತಿನ ಮನೆಗಳಲ್ಲಿ ಹೇರಳವಾಗಿ ಉತ್ಪಾದನೆ ಇರುವ ಕಾರಣದಿಂದಾಗಿ ಈ ಹೊಸ ಅಕ್ಕಿಯ ಊಟವನ್ನು ಅವರು ಮೊದಲು ಬಳಸುವ ಅಕ್ಕಿಯಿಂದ ಅಂದರೆ ಸಾಮಾನ್ಯವಾಗಿ ಸುಗ್ಗಿ ಬೆಳೆಯ ಸಂದರ್ಭದಲ್ಲಿ ಮಾಡುತ್ತಾರೆ.

'ಕೆಡ್ಡಸ' ಮತ್ತು 'ಪತ್ತನಾಜೆ' ಈ ಎರಡು ಹಬ್ಬಗಳು ತುಳು ಸಂಸ್ಕೃತಿಯ ಭಾಗವಾಗಿವೆ. ಗುತ್ತಿನ ಮನೆಗಳಲ್ಲಿ ಇದನ್ನು ವಿಶೇಷವಾಗಿ ಆಚರಿಸುತ್ತಾರೆ. 'ಕೆಡ್ಡಸ'ವೆಂದು ಕರೆಯುವ ಈ ಹಬ್ಬಕ್ಕೆ ಧಾರ್ಮಿಕವಾದ ಸಂಕೇತವೂ ಇದ್ದು, ಭೂಮಿತಾಯಿ ರಜಸ್ವಲೆಯಾದ ದಿನವೆಂದು ಭಾವಿಸಿ, ಮೂರುದಿನ ಈ ಹಬ್ಬವನ್ನು ಆಚರಿಸುತ್ತಾರೆ. ಇದು ಮಕರಮಾಸದ ೨೭ರಂದು ಆರಂಭಗೊಳ್ಳುತ್ತದೆ. ಅಂದು ಭೂಮಿಗೆ ನೋವಾಗುವ, ಅಂದರೆ ಅಗೆಯುವ, ಉಳುವ ಕೆಲಸವನ್ನು ಮಾಡುವುದಿಲ್ಲ. ಕೆಡ್ಡಸದ ದಿನದಂದು ಬೇಟೆಯಾಡುವುದು ವಿಶೇಷ. ಮೂರು ದಿವಸ ಯಾವುದೇ ಕೃಷಿ ಕೆಲಸವಿಲ್ಲದ ಕಾರಣ ಅಂದು ಬೇಟೆಗಾಗಿ ಆ ದಿನವನ್ನು ಮೀಸಲಿಡುತ್ತಾರೆ. ಹಿಂದೆ ತಮ್ಮ ಕೃಷಿಭೂಮಿಯ ಸುತ್ತ ಮಳೆ, ಗೊಬ್ಬರ, ಪಶುಗಳಿಗೆ ಆಹಾರಕ್ಕಾಗಿ ಮರಗಳನ್ನು ಕಡಿಯದೆ ಬೆಳೆಸುತ್ತಿದ್ದರು. ಇಂತಹ ಸ್ಥಳಗಳಲ್ಲಿ ಕಾಡುಪ್ರಾಣಿಗಳು ವಾಸಮಾಡಿಕೊಂಡು ಕೃಷಿಗೆ, ಸಾಕುಪ್ರಾಣಿಗಳಿಗೆ ತೊಂದರೆ ಕೊಡಲಾರಂಭಿಸಿತು. ಆದ್ದರಿಂದ ಆ ಪ್ರಾಣಿಗಳನ್ನು ಬೇಟೆಯಾಡಲು ಒಂದು ದಿನದ ಅವಶ್ಯಕತೆಯಿತ್ತು. ಅದಕ್ಕಾಗಿ ಕೆಡ್ಡಸದ ದಿನದಂದು ಬೇಟೆಯಾಡುವ ಸಂಪ್ರದಾಯ ಬಂದಿತು. ಬೇಟೆಯಾಡಿದ ಪ್ರಾಣಿಗಳ ಮಾಂಸವನ್ನು ಎಲ್ಲರೂ ಹಂಚಿಕೊಳ್ಳುವುದು ವಿಶೇಷ. ಗುತ್ತಿನ ಮನೆಯವರಿಗೆ ಮಾಂಸದ ಅಡುಗೆಯಲ್ಲಿ ವಿಶೇಷ ಕಾಳಜಿ. ಅದಕ್ಕಾಗಿ ತಾವು ಹಾಗೂ ತಮ್ಮ ಒಕ್ಕಲಿನವರು, ಮೂಲದ ಮುಗೇರರು ಎಲ್ಲಾ ಸೇರಿ ಬೇಟೆಯಾಡುವುದು ಒಂದು ಹವ್ಯಾಸವಾಗಿ ಬೆಳೆಯಿತು. ಕಾಲಕ್ರಮೇಣ ಕೆಡ್ಡಸಕ್ಕೆ ಮಾಂಸಾಹಾರ ಮಾಡಬೇಕು ಎನ್ನುವ ನಂಬಿಕೆ ಬಂದು ಬೇಟೆಯಾಡುವುದು ಒಂದು ಸಂಸ್ಕೃತಿಯಾಯಿತು.

'ಪತ್ತನಾಜೆ'(ಹತ್ತನಾವದಿ)ಯು ವೃಷಭಮಾಸದ ಹತ್ತನೆಯ ದಿನ. ತುಳುನಾಡಿನ ಎಲ್ಲಾ ಹಬ್ಬ, ಜಾತ್ರೆ, ಕೋಲ, ಯಕ್ಷಗಾನ ಇತ್ಯಾದಿ ಅಂದು ಕೊನೆಗೊಳ್ಳುತ್ತದೆ. ಪತ್ತನಾಜೆಯ ನಂತರ ಮಳೆಗಾಲ ಆರಂಭವಾಗುತ್ತದೆ ಎನ್ನುವ ಕಾರಣದಿಂದಾಗಿ ಯಾವುದೇ ಉತ್ಸವ, ಆಚರಣೆಗಳನ್ನು ನಂತರ ನಡೆಸಲಾಗುವುದಿಲ್ಲ. ಅಂದು ದೈವಗಳಿಗೆ ಕೋಳಿ ಬಲಿಯನ್ನು ಕೊಟ್ಟು, ಭೂಮಿಗೆ ರಕ್ತವನ್ನು ಹಾಕಿ

ಬರುತ್ತಾರೆ. ಅವೈಜ್ಞಾನಿಕ ನಂಬಿಕೆಯಂತೆ ಕಂಡರೂ ಇದನ್ನು ಬಹಳ ಭಯಭಕ್ತಿಯಿಂದ ಗುತ್ತಿನ ಮನೆಗಳಲ್ಲಿ ಆಚರಿಸುತ್ತಾರೆ.

'ಸಿಂಗಡೆ'ಯ ಬಗ್ಗೆಯೂ ಗುತ್ತಿನ ಜನರಿಗೆ ವಿಶೇಷವಾದ ನಂಬಿಕೆಯಿದೆ. ತಿಂಗಳ ಮೊದಲ ದಿನವನ್ನು ಸಿಂಗಡೆಯೆಂದು ಕರೆಯುತ್ತಾರೆ. ಈ ದಿನವನ್ನು ಅಶುಭವೆಂದು ಭಾವಿಸಿ ಯಾವುದೇ ಒಳ್ಳೆಯ ಕಾರ್ಯಗಳನ್ನು ಅಂದು ಕೈಗೆತ್ತಿಕೊಳ್ಳುವುದಿಲ್ಲ. ಅಂದು ಯಾವುದೇ ಕೆಲಸವನ್ನು ಮಾಡಲು ತೊಡಗಿದರೆ ಅದು ಅಷ್ಟುಬೇಗ ಪೂರ್ಣಗೊಳ್ಳುವುದಿಲ್ಲ ಎನ್ನುವ ಅವೈಜ್ಞಾನಿಕ ನಂಬಿಕೆಯಿದೆ. ಸಿಂಗಡೆಯ ದಿವಸ ಗುತ್ತಿನ ಜನರು ಹಣವನ್ನಾಗಲೀ ಅಥವಾ ಯಾವುದೇ ವಸ್ತುವನ್ನಾಗಲೀ ಇತರಿಗೆ ಕೊಡುವುದಿಲ್ಲ. ಗುತ್ತಿನ ಜನರಿಗೆ ಸಿಂಗಡೆಯ ಬಗ್ಗೆ ಅತಿಯಾದ ನಂಬಿಕೆಯಿರುವುದರಿಂದ ಶುಭಕಾರ್ಯಗಳನ್ನು ಸಿಂಗಡೆಯ ದಿನವನ್ನು ತಪ್ಪಿಸಿ ಮಾಡುತ್ತಿದ್ದರು. ಇದು ತುಳುನಾಡಿನ ಸಂಸ್ಕೃತಿಯಲ್ಲಿ ವಿಶೇಷವಾಗಿ ಕಾಣಿಸಿಕೊಳ್ಳುತ್ತದೆ.

ಮೂಲದ ಮುಗೇರರು ಮತ್ತು ಗುತ್ತಿನವರ ಸಂಬಂಧ ತುಂಬಾ ವಿಶಿಷ್ಟವಾದುದು. ಮೂಲದ ಮುಗೇರರ ಹಿರಿಯನಲ್ಲಿ ಹೇಳದೆ ಕೇಳದೆ ಯಾವುದೇ ಬೇಸಾಯದ ಕೆಲಸವು ಗುತ್ತಿನಲ್ಲಿ ನಡೆಯದು. ಕೃಷಿ ಕಾರ್ಯದಲ್ಲಿ ಅವರಿಗಿದ್ದ ವಿಶೇಷ ಅನುಭವವು ಇಲ್ಲಿ ಸ್ಪಷ್ಟಗೊಳ್ಳುತ್ತದೆ. ಅವರು ಕುಟುಂಬದವರಿಗೆ ಕುಟುಂಬದವರಂತೆ, ಬೀಗರಿಗೆ ಬೀಗರಂತೆ ಒಡನಾಟವನ್ನು ಹೊಂದಿರುತ್ತಾರೆ. ಮೂಲದ ಮುಗೇರ ಕೇರಿಯವರಿಗೂ ಗುತ್ತಿನವರಂತೆ ಗಡಿಹಿಡಿದ ಗುರಿಕಾರನಿರಬೇಕು. ದುಡಿದು ಗಟ್ಟಿಮುಟ್ಟಾದ ಮೂಲದ ಮುಗೇರರು ಯಾವುದಕ್ಕೂ ಹಿಂಜರಿಯರು. ಗುತ್ತಿನ ಮೇಲಿರುವ ಗೌರವ, ಭಯ, ಭಕ್ತಿ ವಿಶೇಷವಾದುದು. ಉಂಡ ಮನೆಗೆ ಎಂದೂ ಕೂಡ ಮೋಸಮಾಡಲಾರರು. ಕೋಳಿ ಅಂಕದ ಸಂದರ್ಭದಲ್ಲಿ ಮಿತ್ತಬೈಲಿನ ಗುತ್ತಿನ ವಿಷಯದಲ್ಲಿ ಪಕ್ಕದ ಗ್ರಾಮದ ಯುವಕನೊಬ್ಬ ತಪ್ಪಿ ಮಾತಾಡಿದನೆಂದು ಹಾಡುಹಗಲೇ ಅವರ ಬೀಡಿಗೆ ನುಗ್ಗಿ ಆ ಯುವಕನನ್ನು ಅವರ ಚಾವಡಿಯಲ್ಲೇ ಹತ್ಯೆಮಾಡಿ ಬಂದವರು ಮಿತ್ತಬೈಲಿನ ಮುಗೇರರು. ಹಾಗೆಯೇ, ಜೈನರ ಬೀಡಿನೊಳಗೆ ಹೋಗುವಾಗ ಮುಂಡಾಸು ಕಟ್ಟಿಕೊಂಡು ಹೋಗಿದ್ದ ಯಜಮಾನರ ಮುಂಡಾಸು ತೆಗೆಯಲು ಅಲ್ಲಿನವರು ತಲೆಗೆ ಕೈಹಾಕಿದರು ಎನ್ನುವ ಒಂದೇ ಒಂದು ವಿಷಯಕ್ಕೆ ಜೈನರ ಬೀಡಿಗೆ ಬೆಂಕಿಕೊಟ್ಟು, ಮುಂಡಾಸಿಗೆ ಕೈಹಾಕಿದ ಯುವಕನ ಕೈಯನ್ನು ಕಡಿದು, ಜೈನ ಗಂಡಸರನ್ನು, ಹೆಂಗಸರನ್ನು ದನಕರುಗಳನ್ನು ಅಟ್ಟುವಂತೆ ಈ ಮೊಗೇರರು ಅಟ್ಟಿದ್ದಾರೆ. ತಮ್ಮ ಅನ್ನದಾತರಿಗೆ ಅವರು ಪ್ರಾಣವನ್ನು ಕೊಡಲು ತಯಾರಾಗಿರುತ್ತಿದ್ದರು. ಇದು ಅವರ ಸ್ವಾಮಿನಿಷ್ಠೆ ಎಷ್ಟರಮಟ್ಟಿಗಿತ್ತೆಂಬುದನ್ನು ಸೂಚಿಸುತ್ತದೆ. ಮೂಲದವರ ಮಧ್ಯೆ ಜಗಳವುಂಟಾದರೆ, ಅದು

ಕೊನೆಗೊಳ್ಳುತ್ತಿದ್ದುದ್ದು ಗುತ್ತಿನ ಚಾವಡಿಯಲ್ಲಿಯೇ. ತಮ್ಮವರು ಎಷ್ಟೇ ತಪ್ಪು ಮಾಡಿದ್ದರೂ ಗುತ್ತಿನವರ ಪಾಲಿಗೆ ಅದು ಸರಿಯೇ. ಗುತ್ತಿನವರು ಎಂದೂ ಕೂಡಾ ಮೂಲದವರನ್ನು ಹೊರಹಾಕುತ್ತಿರಲಿಲ್ಲ. ಇದು ಅವರ ಗೌರವಯುತ ನಂಬಿಕೆಯ ಸಂಕೇತ. ಮೂಲದವರಿಗೆ ಯಾರಾದರೂ ಹೊಡೆದರೆ, ತೊಂದರೆಕೊಟ್ಟರೆ ಅದು ತಮಗೇ ಮಾಡಿದ ಅಪಮಾನವೆಂದು ಪರಿಗಣಿಸಿ ಗುತ್ತಿನವರು ಪ್ರತೀಕಾರ ತೀರಿಸಿಕೊಳ್ಳುತ್ತಿದ್ದರು. ಇದು ಅವರ ಆತ್ಮೀಯತೆಯ ಲಕ್ಷಣ. ತಮ್ಮ ಆಶ್ರಯದಲ್ಲಿರುವವರಿಗೆ ಏನು ಬೇಕಾದರೂ ಮಾಡಲು ಗುತ್ತಿನವರು ಹಿಂದೆ ಮುಂದೆ ನೋಡುವವರಲ್ಲ.

ಮೂಲದ ಮುಗೇರರು ಗುತ್ತಿನವರ ಒಪ್ಪಿಗೆಯಿಲ್ಲದೆ ಬೇರೆ ಮನೆಗೆ ಕೆಲಸಕ್ಕೆ ಹೋಗುವಂತಿಲ್ಲ. ಅವರ ಮದುವೆ ಸಮಾರಂಭಗಳೂ ಕೂಡ ಗುತ್ತಿನ ಒಪ್ಪಿಗೆಯಲ್ಲೇ ನಡೆಯಬೇಕು. ಮದುವೆಯಾಗಿ ಯಾರಾದರೂ ಬೇರೆ ಸಂಸಾರ ಮಾಡುವುದಾದರೆ ಅವರಿಗೊಂದು ಗುಡಿಸಲು ಕಟ್ಟಿಕೊಟ್ಟು, ಒಂದು ತೆಂಗಿನಮರ, ಒಂದು ಹಲಸಿನಮರ, ಒಂದು ಮಾವಿನಮರ ಹಾಗೂ ಒಂದು ಹುಣಸೆಮರವನ್ನು ಗುತ್ತಿನವರು ಬಿಟ್ಟುಕೊಡುತ್ತಿದ್ದರು. ಆ ಕಾಲದಲ್ಲಿ ಈ ಮರಗಳು ಬೇಕೇಬೇಕು. ಒಂದು ಕುಟುಂಬದ ಸಾಮಾನ್ಯ ಲಕ್ಷಣಗಳಲ್ಲಿ ಇವುಗಳು ಸೇರಿಕೊಂಡಿವೆ. ಅದಕ್ಕಾಗಿ ಈ ಮರಗಳನ್ನು ಮೂಲದವರಿಗೆ ಬಿಟ್ಟುಕೊಡುತ್ತಿದ್ದರು ಹಾಗೂ ಮದುವೆಯಾಗಿ ಬಂದ ಹೆಣ್ಣಿಗೂ ಗುತ್ತಿನಲ್ಲೇ ಕೆಲಸ ಕೊಡುತ್ತಿದ್ದರು. ಗುತ್ತಿನ ಮನೆಯಲ್ಲಿ ಯಾರಾದರೂ ಸತ್ತರೆ ಮುಗೇರ ಕೇರಿಯವರಿಗೆ ಸೂತಕವಿರುತ್ತದೆ. ಮುಗೇರರ ಕೇರಿಯಲ್ಲಿ ಯಾರಾದರೂ ಸತ್ತರೆ, ಗುತ್ತಿನವರಿಗೆ ಸೂತಕವಿರುತ್ತದೆ. ಸೂತಕದ ಸಮಯದ ಶಿಷ್ಟಾಚಾರದಂತೆ ದೈವದೇವರ ಗುಡಿಗೆ ಹೋಗುವುದಿಲ್ಲ. ಗುತ್ತಿನ ಯಜಮಾನ ಸತ್ತರೆ, ಕೇರಿಯವರು ಸ್ನಾನ ಮಾಡಿ, ಉಂಡು, ಮದ್ಯಪಾನ ಹಾಗೂ ಮಾಂಸ ತಿನ್ನುವುದನ್ನು ನಿಗದಿತ ದಿನಗಳವರೆಗೆ ಬಿಡುತ್ತಾರೆ. ಕೇರಿಯಲ್ಲಿ ಯಾರಾದರೂ ಸತ್ತರೆ ಹೆಣ ತೆಗೆಯುವವರೆಗೂ ಗುತ್ತಿನವರು ಆಹಾರ ತೆಗೆದುಕೊಳ್ಳುವುದಿಲ್ಲ. ಈ ರೀತಿಯಾಗಿ ಮೂಲದ ಮುಗೇರರು ಮತ್ತು ಗುತ್ತಿನವರ ಸಂಬಂಧವಿತ್ತು. ಅದೇ ರೀತಿಯಲ್ಲಿ ತುಳುನಾಡಿನಲ್ಲಿರುವ ಇನ್ನುಳಿದ ಜಾತಿಯವರಾದ ಬ್ರಾಹ್ಮಣರು, ಕೊಂಕಣಿಗಳು, ಮುಸ್ಲಿಮರು, ಕ್ರೈಸ್ತರು, ಬಿಲ್ಲವರು, ಕುಡಿಯರು, ಮೊಯ್ಲಿಗಳು, ಇವರೆಲ್ಲರು ಗುತ್ತಿನ ಜೊತೆಗೆ ನಿಕಟಸಂಪರ್ಕದಲ್ಲಿದ್ದರು.

ಸಾಮಾಜಿಕವಾಗಿ ಗುತ್ತಿನವರಿಗೆ ಕೃಷಿಯೇ ಪ್ರಧಾನವಾದ ಉದ್ಯೋಗ. ಅದಕ್ಕಾಗಿ ಅವರು ಕಾಡನ್ನು ಕಡಿದು ಗುಡ್ಡವನ್ನು ಅಗೆದು ಕೃಷಿಗಾಗಿ ಭೂಮಿಯನ್ನು ಮಾಡಿಕೊಳ್ಳುತ್ತಿದ್ದರು. ಅಂದಿನ ಯುವಜನಾಂಗ ಸಂಪೂರ್ಣವಾಗಿ ಕೃಷಿಯನ್ನೇ ಅವಲಂಬಿಸಿದ್ದರು. ಇಂದಿನ ಯುವ ಜನತೆ ಸ್ಫೂರ್ತಿಗೊಳ್ಳುವಂತೆ ಕೃಷಿಯಲ್ಲಿ

ತೊಡಗಿ, ಸಂತೃಪ್ತಿಯನ್ನು ಕಾಣುತ್ತಿದ್ದರು. ಅವರು ಬೆಳೆಯುವ ಬೆಳೆಗಳು ಕೂಡಾ ವಿವಿಧ ರೀತಿಯಿಂದ ಕೂಡಿತ್ತು – ನೇಮದ ಊಟಕ್ಕಾಗಿ ನೇಮದ ಗದ್ದೆಯಲ್ಲಿ ಬೆಳೆಸಿದ 'ಅತಿಕಾರೆ', ಬೆಳ್ತಿಗೆಗಾಗಿ 'ಗಂಧಸಾಲೆ', ಊಟಕ್ಕೆ 'ಮಸ್ಕತ್' ಹಾಗೂ ಮಳೆಗಾಲದ ಎಣೆಲಿನ ಕಾಲಕ್ಕೆ ಬೆಳೆಯುವ ಊಟದ ಅಕ್ಕಿ 'ಕಯಮೆ'. ಹೀಗೆ ಇಂದಿನ ಪೀಳಿಗೆಯವರು ನೋಡದ, ಕೇಳದ ದೇಸೀ ತಳಿಗಳು ಅಂದು ಬೇರೆ ಬೇರೆ ಕಾರ್ಯಗಳಿಗೋಸ್ಕರ ಬಳಕೆಯಾಗುತ್ತಿತ್ತು. ಅವರಿಗೆ ಆ ತಳಿಗಳ ಅಕ್ಕಿಯ ರುಚಿ, ಅದು ಉಪಯೋಗಿಸಲ್ಪಡುವ ಕಾಲ ಎಲ್ಲವೂ ಗೊತ್ತಿತ್ತು. ದೈಹಿಕವಾಗಿ ಶ್ರಮದಾಯಕವಾದ ಬೇಸಾಯದ ಕೆಲಸದಲ್ಲಿ ಯಾವುದೇ ಕ್ರಮ ತಪ್ಪಿ ಹೋಗುತ್ತಿರಲಿಲ್ಲ. ಏತವನ್ನು ಉಪಯೋಗಿಸಿ ನೀರು ಸೇದು ಕೃಷಿಯನ್ನು ಮಾಡುವಷ್ಟರ ಮಟ್ಟಿಗೆ ಕೃಷಿಯಲ್ಲಿ ಅವರಿಗೆ ಪ್ರೀತಿ ಇತ್ತು. ಇದರ ಪರಿಣಾಮವಾಗಿ ಕಂದಾಯವನ್ನು ಕೃಷಿ ಉತ್ಪನ್ನಗಳ ರೂಪದಲ್ಲಿ ಕೊಡುತ್ತಿದ್ದರು. ಸಾಮಾನ್ಯವಾಗಿ ಇದು 'ಮುಡಿ' (೪೮ ಸೇರು ಅಕ್ಕಿ) ಲೆಕ್ಕಾಚಾರದಲ್ಲಿ ನಡೆಯುತ್ತಿತ್ತು. ಈ ರೀತಿಯ ಕಂದಾಯದ ಪರಿಣಾಮವಾಗಿ ಕೃಷಿಯಲ್ಲಿ ಆಸಕ್ತಿಯು ಹುಟ್ಟುತ್ತಿತ್ತು ಹಾಗೂ ಇದು ಗುತ್ತಿನ ಒಕ್ಕಲಿನವರಿಗೂ, ಮತ್ತು ಗುತ್ತಿನವರಿಗೂ ಅನ್ವಯವಾಗುತ್ತಿತ್ತು. ಇದರ ಪರಿಣಾಮವಾಗಿ ಕೃಷಿ ಭೂಮಿಯನ್ನು ಹೆಚ್ಚಿಸುವುದು ಆರಂಭವಾಯಿತು. ಕೃಷಿಯಲ್ಲಿ ಯಾವಾಗಲೂ ಆರಂಭ ಕಷ್ಟವಾದುದು, ಅಂತಹ ಕಷ್ಟದ ಕೆಲಸವನ್ನು ಗುತ್ತಿನ ಮನೆಯವರು ಆಳುಗಳ ಸಹಾಯದಿಂದ ಮಾಡಿಸಿ, ತುಂಬಾ ಭೂಮಿಯನ್ನು ಹೊಂದಲು ಅನುಕೂಲವಾಯಿತು. ಇದು ಅವರ ಆರ್ಥಿಕ ಸಫಲತೆಗೆ ಕೂಡ ಒಂದು ಕಾರಣವಾಯಿತು. ಕೃಷಿಯೇ ಬದುಕಿನ ಮೂಲವಾಗಿರುವ ಗುತ್ತಿನ ಮನೆಯಲ್ಲಿ ಉಳುಮೆಗಾಗಿ ಕೆಲವು ಜೊತೆ ಕೋಣಗಳು, ಗೊಬ್ಬರಕ್ಕಾಗಿ, ಹಾಲಿಗಾಗಿ ದನ, ಕರುಗಳು ಇರುತ್ತಿದ್ದವು.

ಅಸ್ಪೃಶ್ಯತೆಯು ಹಿಂದೆ ಪ್ರಬಲವಾಗಿ ಆಚರಣೆಯಲ್ಲಿತ್ತು. ಇದು ಮೇಲ್ವರ್ಗದವರಿಗೆ ಅನುಕೂಲವು ಆಗಿತ್ತು. ಗುತ್ತಿನ ಕೆಲಸ ಸಾಮಾಜಿಕ ಸ್ಥಾನಮಾನ ಗೌರವಯುತವಾಗಿರಬೇಕಾದರೆ ಅಸ್ಪೃಶ್ಯತೆಯನ್ನು ಬಲಪಡಿಸಬೇಕು. ಆದರೆ ಗಾಂಧೀ ಸಿದ್ಧಾಂತಕ್ಕೆ ಒಳಪಟ್ಟ ಸುಬ್ಬಯಣ್ಣ, ಭೂತದ ಗಡಿ ಹಿಡಿದು ಗುರಿಕಾರನಾದ ಸಂದರ್ಭದಲ್ಲಿ ಮಾಡಿದ ಮೊದಲ ಕೆಲಸವೆಂದರೆ ದಲಿತರನ್ನು, ಕೊರಗರನ್ನೂ, ನಲಿಕೆಯವರನ್ನೂ ಮುಟ್ಟಿದರೆ ಸ್ನಾನಮಾಡಿ ಮನೆ ಪ್ರವೇಶಿಸಬೇಕು ಎನ್ನುವ ಕ್ರಮವನ್ನು ಬದಲಾಯಿಸಿದ್ದು. ಹಿಂದೆ ಗಡಿಹಿಡಿದವರು ಭೂತದಿಂದ ವೀಳ್ಯ ತೆಗೆದು ಇತರರಿಗೆ ಕೊಡುವ ಕ್ರಮವಿತ್ತು, ಅದನ್ನು ಶುದ್ಧವಾಗಿರುವ ಊರಿನ ಎಲ್ಲರೂ ಅಂಗಿ ತೆಗೆದು ನಿಂತರೆ ಭೂತವೇ ವೀಳ್ಯವನ್ನು ಕೊಡುವಂತೆ ಮಾಡಿದ ಕೀರ್ತಿ ಸುಬ್ಬಯಣ್ಣನವರಿಗೆ ಸಲ್ಲುತ್ತದೆ. ಮೇಲ್ಜಾತಿ ಮತ್ತು ಕೆಳಜಾತಿಯವರಿಗಿಂತ ಭಿನ್ನವಾದ,

ಪ್ರಬಲವಾದ ಅಸ್ಪೃಶ್ಯತೆಯ ಕಟ್ಟುಪಾಡು ಮುಗೇರರು ಮತ್ತು ಕಾಡಿನವರಲ್ಲಿದೆ. ಅವರಲ್ಲಿ ಮುಗೇರರು ಮೇಲು, ಕೊರಗರು ಕೀಳು. ಅದು ಕಾಡಿನಲ್ಲಿ ಹರಿಯುವ ನೀರನ್ನು ಉಪಯೋಗಿಸುವುದರಲ್ಲಿಯೂ ಇದೆ.

"ಕಾಡಿನ ಒರತೆಯ ನೀರನ್ನು ಕಾಡಿನ ಕೊರಗರು ಕುಡಿಯಲು ಉಪಯೋಗಿಸುವುದರಿಂದ ಮುಗೇರರು ಕಾಡಿನವರ ಗುಡಿಸಲುಗಳಿಗೆ ನುಗ್ಗಿ ಎಳೆದು ಹಾಕಿ ಹೊಡೆದಿದ್ದಾರೆ. ಪಾತ್ರೆ ಸಾಮಾಗ್ರಿಗಳನ್ನು ಎಳೆದು ಹೊರಗೆಸೆದಿದ್ದಾರೆ. ಕೊರಗರ ಮನೆಯ ಕೆಳಭಾಗದಲ್ಲಿರುವ ಮುಗೇರರಿಗೆ ಕೊರಗರು ಉಪಯೋಗಿಸಿದ ಹರಿಯುವ ನೀರು ಮೈಲಿಗೆಯಾಗಿ ಬರುತ್ತದೆ. ಸುಬ್ಬಯಣ್ಣನು ಮಿತ್ತಬೈಲಲ್ಲಿ ಅದರ ವಿಚಾರಣೆ ಮಾಡುವಾಗ ಮುಗೇರರು ಮಿತ್ತಬೈಲಿನ ಅಂಗಳಕ್ಕೆ ಬರುತ್ತಾರೆ, ಕಾಡಿನವರು ಗದ್ದೆಯ ಬದುವಿನಲ್ಲೇ ನಿಲ್ಲುತ್ತಾರೆ. ಕೊನೆಗೆ ಗದರಿಸಿ ಕರೆದಾಗ ಅಂಗಳಕ್ಕೆ ಬಂದು ಒಂದಷ್ಟು ದೂರ ನಿಂತುಕೊಳ್ಳುತ್ತಾರೆ. ಈ ಅಂಗಳದಲ್ಲೂ ನಿಮಗೆ ಭಯವೇ? ಅಷ್ಟು ದೂರ ಯಾಕೆ ನಿಂತಿದ್ದೀರಿ? ಹತ್ತಿರ ಬನ್ನಿ !"[೧] ಎಂದು ಸುಬ್ಬಯಣ್ಣ ಹೇಳಿದಾಗ ರಾಮಣ್ಣ, ಕಾಡಿನವರ ನೆರಳು ಮುಗೇರರ ಮೇಲೆ ಬೀಳಬಾರದು, ಅದಕ್ಕಾಗಿ ದೂರ ನಿಂತಿದ್ದಾರೆ. ಮುಟ್ಟಿದರೆ ಮೈಲಿಗೆಯಾಗುವುದಕ್ಕಿಂತ ಹೊರತಾಗಿ ನೆರಳು ತಾಗಿದರೂ ಮೈಲಿಗೆಯಾಗುತ್ತದೆ ಎನ್ನುವ ಭಾವನೆ ಮುಗೇರರಲ್ಲಿದೆ. ಗುತ್ತಿನ ಅಂಗಳವನ್ನು ಏರಲು ಅವಕಾಶವಿಲ್ಲದ ಕೊರಗರು ಸುಬ್ಬಯಣ್ಣನ ಮಾತಿಗೆ ಅಂಗಳವನ್ನು ಪ್ರವೇಶಿಸಿದ್ದಾರೆ. ಸುಬ್ಬಯಣ್ಣ ಕೊಡುವ ತೀರ್ಪು ಅವರ ಮನಸ್ಸಲ್ಲಿ ತಪ್ಪಿನ ಅರಿವನ್ನು ಉಂಟುಮಾಡುತ್ತದೆ. ತಮ್ಮಲ್ಲೇ ಪಾಪಪ್ರಜ್ಞೆಯನ್ನು ಕಾಡುವಂತೆ ಅವರು ಮುಗೇರರು ಮತ್ತು ಕಾಡಿನವರಲ್ಲಿ ಪ್ರಶ್ನಿಸುತ್ತಾರೆ. ತಪ್ಪಿನ ಅರಿವಾಗಿ ಕಾಲಿಗೆ ಬಿದ್ದ ಮುಗೇರರನ್ನು ಎಬ್ಬಿಸಿ, "ನೀವು ಈ ಕಾಡಿನವರ ಕಾಲಿಗೆ ಬೀಳಬೇಕು, ನನ್ನ ಕಾಲಿಗಲ್ಲ. ಹೋಗಿ ಅವರ ಹೆಗಲ ಮೇಲೆ ಕೈಹಾಕಿಕೊಂಡು ಒಂದೇ ತಾಯಿಯ ಮಕ್ಕಳಂತೆ ಈ ಅಂಗಳ ಇಳಿದಿರಾದರೆ ಈ ದೇಶಕ್ಕೆ ಬೇಕಾಗಿ ಮೊನ್ನೆ ಪ್ರಾಣಾರ್ಪಣೆ ಮಾಡಿದ ಆ ಬಾಪೂಜಿಯ ಆತ್ಮಕ್ಕೆ ಶಾಂತಿ ಸಿಗಬಹುದು. ಅದು ಅವರಿಗೆ ನೀವು ಕೊಡುವ ಗೌರವ, ಹೋಗಿ ಒಂದೇ ತಾಯಿಯ ಮಕ್ಕಳಂತೆ ಬಾಳಿ"[೨] ಸುಬ್ಬಯಣ್ಣನ ಮಾತು ಗಾಂಧೀ ತತ್ವದ ಜೊತೆಸೇರಿ ಸಾಮಾಜಿಕ ಅಸಮಾನತೆಯನ್ನು ಹೋಗಲಾಡಿಸುವಲ್ಲಿ ಪ್ರಾಮುಖ್ಯತೆಯನ್ನು ಪಡೆಯುತ್ತದೆ. ಮುಗೇರರು, ಕಾಡಿನವರು ಒಟ್ಟಾಗಿ ಬಾಳಿದರೆ ಗುತ್ತಿನ ಚಾಕರಿಗಾಗಲಿ, ಶೋಷಣೆಗಾಗಲಿ ತೊಂದರೆಯಾಗಬಹುದು ಎನ್ನುವ ಮನಸ್ಥಿತಿ ಅವರಲ್ಲಿಲ್ಲ. ಸಾಮಾಜಿಕವಾಗಿ ಎಲ್ಲಾ ಜಾತಿಯವರನ್ನು ಒಂದೇ ದೃಷ್ಟಿಕೋನದಲ್ಲಿ ನೋಡುವ, ಎಲ್ಲರೂ ಅಭಿವೃದ್ಧಿ ಹೊಂದುವ, ಸ್ವಾತಂತ್ರ್ಯವನ್ನು ಪಡೆಯುವ

---

೧ ಮಹಮ್ಮದ್ ಕುಳಾಯಿ – ಮಿತ್ತಬೈಲ್ ಯಮುನಕ್ಕ – ಪು.ಸಂ. ೨೬೩

೨ ಮಹಮ್ಮದ್ ಕುಳಾಯಿ – ಮಿತ್ತಬೈಲ್ ಯಮುನಕ್ಕ – ಪು.ಸಂ. ೨೬೫

ಅವಕಾಶವನ್ನು ಗುತ್ತು ಮಾಡಿಕೊಡುತ್ತದೆ. ಗಾಂಧೀ ಚಿಂತನೆಗಳನ್ನು ಅಳವಡಿಸಲು ಕಾರ್ಯಕ್ರಮಕ್ಕೆ ತರಲು ಅವಕಾಶಗಳು ಬೇಕಿತ್ತು. ಆ ಅವಕಾಶವನ್ನು ಗುತ್ತು ಮಾಡಿಕೊಡುತ್ತಿದೆ.

ಗುತ್ತಿನ ಸಂರಚನೆಯಲ್ಲಿ ಬಂಟರ ಸಂಬಂಧಗಳು ಮಾತ್ರವಲ್ಲ. ತುಳುನಾಡಿನ ಇತರ ಪ್ರಮುಖ ಜಾತಿಯವರಾದ ಬ್ರಾಹ್ಮಣರು, ಕೊಂಕಣಿಗಳು, ಬಿಲ್ಲವರು, ಮುಗೇರರು, ಬ್ಯಾರಿಗಳು ಹಾಗೆ ಹೆಚ್ಚಿನ ಜಾತಿಯವರ ಜೊತೆ ಅನ್ಯೋನ್ಯ ಸಂಬಂಧವಿತ್ತು. ಮಂಜೇಶ್ವರದ ಭಂಡಾರ ಮಠ ಇಡೀ ರಾಜ್ಯದಲ್ಲೇ ಕೊಂಕಣಿಗಳು ಗೌರವಿಸುವ ಮನೆ. ಭಂಡಾರ ಮಠ ಮತ್ತು ಮಿತ್ತಬೈಲಿನ ಗೆಳೆತನ ಮಿತ್ತಬೈಲಿನ ಆದಿಯ ಯಜಮಾನ ಮಂಜನಾಳ್ವರಿಂದಲೇ ಆರಂಭಗೊಂಡಿತ್ತು. ಮಂಜನಾಳ್ವ ಮತ್ತು ದೇವಯ ಭಂಡಾರಿ ಆತ್ಮೀಯರು. ಯಮುನಕ್ಕನ ಕಾಲದಲ್ಲಿ ಭಂಡಾರ ಮಠದಲ್ಲಿ ನರಸಯ ಭಂಡಾರಿಗಳಿದ್ದರು. ಆ ಸಂದರ್ಭದಲ್ಲಿಯೂ ಆದಿಯ ಗೆಳೆತನವನ್ನು ಬಿಟ್ಟಿರಲಿಲ್ಲ. "ಹಿರಿಯರು ಎಷ್ಟೋ ಸಲ ಮಿತ್ತಬೈಲಿನಲ್ಲಿ ತಮ್ಮ ಮಕ್ಕಳು ಮರಿಗಳನ್ನು ಬಿಟ್ಟುಬಂದು ದೇವಯ ಭಂಡಾರಿಯವರು ಹಾಕಿಕೊಟ್ಟ ಸಂಪ್ರದಾಯವನ್ನು ಮುಂದುವರಿಸಿಕೊಂಡು ಬಂದಿದ್ದರು. ಮಿತ್ತಬೈಲಿನಲ್ಲಿ 'ಭಂಡಾರ ಮಠದ ಪೆಠಾರಿ' ಎಂಬ ಪೆಠಾರಿಯೊಂದು ಈಗಲೂ ಇದೆ. ಇದು ದೇವಯ ಭಂಡಾರಿಯ ಕಾಲದಲ್ಲಿ ನಗ-ನಾಣ್ಯ, ಬಂಗಾರ, ಒಡವೆ ತಂದು ಇಡುತ್ತಿದ್ದುದಕ್ಕೆ ಸಾಕ್ಷಿಯಾಗಿದೆ."[೧] ಈ ರೀತಿಯ ವಿಶ್ವಾಸಪೂರ್ಣ ಗೆಳೆತನ ಈ ಎರಡು ಮನೆತನಗಳ ಮಧ್ಯೆ ಇತ್ತು. ಯಮುನಕ್ಕನ ಕಾಲದಲ್ಲೂ ಆ ಸಂಬಂಧ ಮುಂದುವರೆದಿದೆ. ಯಮುನಕ್ಕ ದಂಡಿಗೆಯಿಂದ ಇಳಿಯುವಾಗ ಸ್ವತಃ ಭಂಡಾರಿಯೇ ಬಂದು ಸ್ವಾಗತಿಸುತ್ತಾರೆ. ಆ ಸಂಬಂಧ ಒಡಹುಟ್ಟಿದ ಅಕ್ಕ ತಮ್ಮನಂತೆ ಇತ್ತು. ಮಿತ್ತಬೈಲಿನ ಏಳಿಗೆಯಲ್ಲಿ ಭಂಡಾರ ಮಠದ ಪಾತ್ರವಿದೆ ಹಾಗೆಯೇ ಭಂಡಾರ ಮಠದ ರಕ್ಷಣೆಯಲ್ಲಿ ಮಿತ್ತಬೈಲಿನ ಸೇವೆಯಿದೆ.

ವ್ಯಾಪಾರವನ್ನು ಮಾಡುವುದಕ್ಕಾಗಿ ತಾಳಿಪ್ಪಾಡಿಯ ಚೋಮಕ್ಕನ ಗಂಡ ಐತ್ತಪ್ಪ ರೈಗಳು ಉಳ್ಳಾಲದ ಬ್ಯಾರಿಗೆ ಬಡ್ಡಿಯ ಮೇಲೆ ಸಾಲ ಕೊಟ್ಟಿದ್ದರು. ಐತಪ್ಪ ರೈಗಳು ಸತ್ತ ಮೇಲೆ ಆ ಬ್ಯಾರಿ ಚೋಮಕ್ಕನನ್ನು ಹುಡುಕಿಕೊಂಡು ಮಜಲೋಡಿಗೆ ಬಂದು ದುಡ್ಡಿನ ಲೆಕ್ಕ ಕೊಟ್ಟ. ಕೊಟ್ಟ ಸಾಲವನ್ನು ಜೀವಂತವಾಗಿರುವಾಗಲೇ ತೀರಿಸದವರು ಇರುವ ಸಂದರ್ಭದಲ್ಲಿ ಪ್ರಾಮಾಣಿಕನಾದ ಬ್ಯಾರಿ ಸಾಲ ತೀರಿಸಲು ಬರುತ್ತಾನೆ. ಚೋಮಕ್ಕ ಆ ದುಡ್ಡನ್ನು ಅವನಲ್ಲೇ ಇಟ್ಟುಕೊಳ್ಳಲು ಹೇಳಿ ತನ್ನ ಹೆಣ್ಣುಮಕ್ಕಳ ಮದುವೆ ಸಂದರ್ಭದಲ್ಲಿ ಹಿಂದಿರುಗಿಸುವಂತೆ ತಿಳಿಸುತ್ತಾಳೆ. ಬ್ಯಾರಿ ಆ ಹಣವನ್ನು ವ್ಯಾಪಾರದಲ್ಲಿ ತೊಡಗಿಸಿ

೧ ಮಹಮ್ಮದ್ ಕುಳಾಯಿ – ಮಿತ್ತಬೈಲ್ ಯಮುನಕ್ಕ – ಪು.ಸಂ. ೪೧

ಪ್ರತಿವರ್ಷ ಮಜಲೋಡಿಗೆ ಬಂದು ಲೆಕ್ಕ ಒಪ್ಪಿಸುತ್ತಿದ್ದ. ಬ್ಯಾರಿ ಬರುವಾಗ ಮೀನು, ಬೆಲ್ಲ, ಖರ್ಜೂರ ತಂದು ಹಂಚುತ್ತಿದ್ದ. ಹೆಣ್ಣು ಮಕ್ಕಳ ಮದುವೆಯಾಗುವಾಗ ಆ ಬ್ಯಾರಿಯಲ್ಲಿ ಹದಿನೈದು ಸಾವಿರ ರೂಪಾಯಿ ಸಂಗ್ರಹವಾಗಿತ್ತು. ಆದರೆ ಒಮ್ಮೆಲೆ ಅಷ್ಟು ದುಡ್ಡು ಕೊಡಲು ಕಷ್ಟವಾಗುವುದಾಗಿ ತಿಳಿಸಿ ನಾಲ್ಕು ತಿಂಗಳ ಒಳಗೆ ಕೊಡುವುದಾಗಿ ಹೇಳಿ ಗುತ್ತಿನ ವ್ಯವಹಾರದ ಬಗ್ಗೆ ವಿಶ್ವಾಸವಿಟ್ಟುಕೊಳ್ಳುತ್ತಾನೆ. ಆ ದುಡ್ಡಲ್ಲಿ ಒಂದು ಸಾವಿರ ರೂಪಾಯಿಯ ಚಿನ್ನ ತಂದು ಕೊಡಲು ಚೋಮಕ್ಕ ಬ್ಯಾರಿಯಲ್ಲಿಯೇ ತಿಳಿಸುತ್ತಾರೆ. ಬ್ಯಾರಿ ಯಾವುದೇ ಮೋಸ ಮಾಡದೆ ಚಿನ್ನವನ್ನು ತರುವಾಗ ತನ್ನ ಮಕ್ಕಳ ಜೊತೆ ಬಂದು ಚಿನ್ನವನ್ನು ಕೊಟ್ಟು ಲೆಕ್ಕವನ್ನು ಹೇಳುತ್ತಾನೆ ಹಾಗೂ ತಾನೂ ಮೆಕ್ಕಾಕ್ಕೆ ಹೋಗುವುದಾಗಿ ತಿಳಿಸುತ್ತಾನೆ. ಮೆಕ್ಕಕ್ಕೆ ಹೋಗುವವನು ಯಾರಿಗೂ ಮೋಸಮಾಡಿ ಸಾಲ ಇಟ್ಟುಕೊಂಡು ಹೋಗಬಾರದು ಎನ್ನುವ ಭಾವನೆಯಿಂದ ತನ್ನ ಮಕ್ಕಳ ಜೊತೆ ಹಣದ ಲೆಕ್ಕವನ್ನು ಹೇಳಿ ಬರುತ್ತಾನೆ. ಗುತ್ತಿನ ವ್ಯವಹಾರದಲ್ಲಿ ಬ್ಯಾರಿಯು ನಂಬಿಕಸ್ಥನಾಗಿರುತ್ತಾನೆ. ಅಲ್ಲಿ ಯಾವುದೇ ಮೋಸವಂಚನೆಯನ್ನು ಮಾಡಲು ಹೋಗುವುದಿಲ್ಲ. ಇದು ಗುತ್ತಿನ ಮೇಲೆ ಅನ್ಯಧರ್ಮೀಯರಿಗೆ ಇರುವ ನಂಬಿಕೆಯ, ಗೌರವದ ವಿಷಯವಾಗಿದೆ. ಇಂದು ಬೇಕಾದಷ್ಟು ಸಾಕ್ಷಿ ಇಟ್ಟುಕೊಂಡು ಸಾಲವನ್ನು ಮಾಡಿದರೂ ಕೊಡಲು ಸಿದ್ಧರಿಲ್ಲ. ಆದರೆ ಅಂದು ಯಾವುದೆ ದಾಖಲೆಗಳಿಲ್ಲದೆ ಇಷ್ಟು ಮೊತ್ತದ ಹಣವನ್ನು ಸಾಲಕೊಡುತ್ತಾರೆ ಅಂದರೆ ಆ ಕಾಲದ ಜನರ ವಿಶ್ವಾಸವನ್ನು ಗೌರವಿಸಬೇಕಾಗುತ್ತದೆ. ಸಾಲವನ್ನು ಕೊಡಲು ಆರ್ಥಿಕ ಸಾಮರ್ಥ್ಯವುಳ್ಳವರೂ ಕೂಡ ಗುತ್ತಿನವರೇ. ಅವರು ಕೊಟ್ಟ ಸಾಲವನ್ನು ಬಡ್ಡಿ ಸಮೇತ ಪಡೆಯಲು ಸಾಮರ್ಥ್ಯವುಳ್ಳವರಾಗಿದ್ದರು. ಒಟ್ಟಾರೆಯಾಗಿ ಹೇಳುವುದಾದರೆ ಗುತ್ತಿನವರಲ್ಲಿ ಸಾಮಾಜಿಕ ಅನ್ಯೋನ್ಯತೆಯು ಬಲಿಷ್ಟವಾಗಿತ್ತು.

ಬ್ರಾಹ್ಮಣರು ಕೂಡಾ ಗುತ್ತಿನ ಮನೆಯ ಏಳಿಗೆಯಲ್ಲಿ ಬಹುಮುಖ್ಯ ಪಾತ್ರವನ್ನು ವಹಿಸುತ್ತಾರೆ. ಬಡಾಜೆಯ ತಂತ್ರಿಗಳು ಮಿತ್ತಬೈಲ್ ಗುತ್ತಿನ ನಿರ್ಮಾಣಕ್ಕೆ ಕಾರಣರಾದವರು. ಮಂಜಣಾಳ್ವನಿಗೆ ಮಿತ್ತಬೈಲಿನ ಭಟ್ಟರಲ್ಲಿ ಮಾತನಾಡಿಸಿ ಮೂಲಗೇಣಿಗೆ ಮಿತ್ತಬೈಲಿನ ಭೂಮಿಯನ್ನು ಕೊಡಲು ಮುಖ್ಯ ಕಾರಣ ಬಡಾಜೆಯ ತಂತ್ರಿಗಳು. ಅವರ ಆಶೀರ್ವಾದವಿಲ್ಲದೆ ಮಾಗಣೆಯ ಬ್ರಾಹ್ಮಣರು ಒಂದು ಹೆಜ್ಜೆ ಮುಂದಿಡಲಾರರು. ಮಾಯಿಪ್ಪಾಡಿ ಅರಸರಿಗೆ ಪಟ್ಟಾಭಿಷೇಕ ಮಾಡುವ, ತಂತ್ರ ಮಂತ್ರಗಳಲ್ಲಿ ಮೇಧಾವಿಗಳಾದ ತಂತ್ರಿಗಳು ಮಿತ್ತಬೈಲಿನ ಕುಟುಂಬದಲ್ಲಿ ಸಕ್ರಿಯರಾದವರು. ಮಿತ್ತಬೈಲಿನ ಪುದ್ವಾರ್ ದಚ್ಚಿ ನೇಮಕ್ಕೆ ತಂತ್ರಿಯವರು ಪ್ರತಿವರ್ಷವೂ ಬರುತ್ತಾರೆ. ಅಲ್ಲಿ ದೈವದ ಭಂಡಾರ ಇಳಿಸಿಕೊಡುವುದು ತಂತ್ರಿಗಳ ಕೆಲಸ. ಮಂಜಣಾಳ್ವನ ಕಾಲದಿಂದ ಯಮುನಕ್ಕನವರೆಗೂ ಆ ಎರಡು ಮನೆತನಗಳ ಸಂಬಂಧ ಸ್ವಲ್ಪವೂ ಕೊರತೆಯಿಲ್ಲದೆ ಮುಂದುವರೆದಿದೆ. ಕೌಟುಂಬಿಕ ವಿಷಯವಾಗಲಿ, ಧಾರ್ಮಿಕ ವಿಷಯವಾಗಲಿ

ಅಲ್ಲಿ ತಂತ್ರಿಗಳ ಭಾಗವಹಿಸುವಿಕೆ ಇದ್ದೇ ಇದೆ. ತಂತ್ರಿಗಳ ಒಪ್ಪಿಗೆಯಿಲ್ಲದೆ ಯಾವುದೇ ಕೆಲಸಗಳು ಅಲ್ಲಿ ಮುಂದುವರಿಯುವುದಿಲ್ಲ. "ಈ ವರ್ಷದ ರಾಮನವಮಿಯ ಪೂಜೆಯಂದು ನಮ್ಮ ಪೂಜೆಯಲ್ಲದೆ ನಾನು ನಿನ್ನ ಹೆಸರಲ್ಲೊಂದು ಮಂಡಲಪೂಜೆಯ ಸಂಕಲ್ಪ ಮಾಡಿಕೊಂಡಿದ್ದೇನೆ. ಅದಕ್ಕೆ ನೀವೆಲ್ಲ ಕುಟುಂಬದವರು ಬರಬೇಕು"[೧] ಎನ್ನುವ ಮಾತಿನಲ್ಲಿ ಆ ಎರಡು ಮನೆತನಗಳ ಬಾಂಧವ್ಯ ವ್ಯಕ್ತಗೊಳ್ಳುತ್ತದೆ. ಯಮುನಕ್ಕನನ್ನು ತಂಗಿಗೆ ಸಮನಾಗಿ ಕಂಡು, ತಂಗಿಯ, ತಂಗಿಯ ಮನೆಯ ರಕ್ಷಣೆ, ಏಳಿಗೆ ಅಣ್ಣನಾದವನ ಜವಾಬ್ದಾರಿ ಎನ್ನುವ ಕ್ರಮದಂತೆ ಬಡಾಜೆಯ ತಂತ್ರಿಗಳ ವಂಶವೇ ಮಿತ್ತಬೈಲಿನ ಏಳಿಗೆಗಾಗಿ ಶ್ರಮಿಸಿದೆ. ಈ ದೃಷ್ಟಿಯಿಂದ ಗಮನಿಸಿದಾಗ ಗುತ್ತಿನ ಮನೆಯ ಏಳಿಗೆ, ಬೆಳವಣಿಗೆಯಲ್ಲಿ ಸಮಾಜದ ಮೇಲ್ವರ್ಗದಲ್ಲಿ ಕಾಣಿಸಿಕೊಳ್ಳುವ ಬ್ರಾಹ್ಮಣರು ಕೂಡಾ ಭಾಗಿಯಾಗಿದ್ದಾರೆ. ಗುತ್ತು ಸಂಸ್ಕೃತಿಯ ಬೆಳವಣಿಗೆಗೆ ಅವರ ಕೊಡುಗೆಯು ಅಪಾರ.

ಗುತ್ತು ಸಂಸ್ಕೃತಿಯೊಂದಿಗೆ ಕುಡಿಯರು, ಮುಗೇರರು, ನಲಿಕೆಯವರು, ಬಿಲ್ಲವರು, ಗಾಣಿಗರು, ಆಚಾರಿಗಳು, ಮೂಲ್ಯರು, ಮೊಯ್ಲಿಯವರು ಹೀಗೆ ತುಳುನಾಡಿನಲ್ಲಿ ಕಾಣಿಸಿಕೊಳ್ಳುವ ಎಲ್ಲಾ ಜಾತಿಯವರು ನಿಕಟ ಸಂಪರ್ಕವನ್ನು ಹೊಂದಿದ್ದರು. ಜಾತಿ ತಾರತಮ್ಯವಿಲ್ಲದೆ ಗುತ್ತಿನ ಸಕಲ ಕಾರ್ಯಗಳಲ್ಲಿ ನೆರವಾಗಿ ಗುತ್ತಿಗೆ ಗೌರವವನ್ನು ತಂದು ಕೊಡುವಲ್ಲಿ ಶ್ರಮವಹಿಸಿವೆ. ಭೂತ, ನೇಮ, ಇತ್ಯಾದಿಗಳ ಸಂದರ್ಭದಲ್ಲಿ ಈ ಜಾತಿಗಳಿಗೆ ನಿರ್ದಿಷ್ಟವಾದ ಕೆಲಸಗಳಿವೆ. ಅವುಗಳನ್ನು ಮಾಡುವುದರ ಮೂಲಕ ಕುಲಗೌರವ ಹಾಗೂ ಸಾಮಾಜಿಕ ಸ್ಥಾನಮಾನವನ್ನು ಗುತ್ತಿನ ಕಾರಣದಿಂದಾಗಿ ಪಡೆದಿವೆ.

ಗುತ್ತಿನ ಮನೆಯಲ್ಲಿ ನಿಧನರಾದರೆ ವಿಶೇಷವಾದ ಕ್ರಮಗಳಿವೆ. ಹಿಂದಿನ ಕಾಲದಲ್ಲಿ ಸತ್ತ ಸುದ್ದಿಯನ್ನು ಬಂಧುಗಳಿಗೆ ತಿಳಿಸಲು ಮೂಲದ ಮುಗೇರರು ಹೋಗುತ್ತಿದ್ದರು. ಹೆಣವನ್ನು ಚಾವಡಿಯ ನೆಲಕ್ಕೆ ತೆಂಗಿನ ಎಣ್ಣೆಯನ್ನು ಹಚ್ಚಿ ದಕ್ಷಿಣ ದಿಕ್ಕಿಗೆ ತಲೆಮಾಡಿ ನೆಲದ ಮೇಲೆ ಮಲಗಿಸುತ್ತಿದ್ದರು. ತಲೆಯ ಪಕ್ಕ ಕಳಸೆ ಅಕ್ಕಿ, ಕಾಲಿನ ಬಳಿ ಕಳಸೆ ಭತ್ತ ರಾಶಿ ಹಾಕಿ ಅದರ ಮೇಲೆ ಸುಲಿಯದ ತೆಂಗಿನ ಕಾಯಿಯನ್ನು ಭಾಗ ಮಾಡಿ ಇಡುತ್ತಾರೆ. ತೆಂಗಿನ ಎಣ್ಣೆಯ ದೀಪವನ್ನು ಉರಿಸಿಡುತ್ತಾರೆ. ಅಂಗಳದ ದಕ್ಷಿಣ ದಿಕ್ಕಿನಲ್ಲಿ ಮೂರುಕಲ್ಲು ಇಟ್ಟು ಒಲೆಮಾಡಿ ಅದರಲ್ಲಿ ಹೊಸಮಡಿಕೆಯಲ್ಲಿ ನೀರನ್ನು ಬಿಸಿಮಾಡುತ್ತಾರೆ. ಸೋಗೆಯ ತಟ್ಟಿ ಅಡ್ಡಕಟ್ಟಿ ಬಿಡುತ್ತಾರೆ. ಗದ್ದೆ ಸಮ ಮಾಡುವ ಹಲಗೆಯ ಮೇಲೆ ಹೆಣವನ್ನು ಮಲಗಿಸಿ, ಸೀಗೆ, ಅರಶಿನ ಸವರುತ್ತಾರೆ. ಕ್ಷೌರಿಕ ಹೆಣದ ಉಗುರು ತೆಗೆದು ಕಾಲಿಗೆ ತೂತು ಗೆರಟೆಯಲ್ಲಿ ನೀರು ಹಾಕುತ್ತಾನೆ.

೧ ಮಿತ್ತಬೈಲ್ ಯಮುನಕ್ಕ – ಮಹಮ್ಮದ್ ಕುಳಾಯಿ, ಪು.ಸಂ. ೩೫

ಹೆಂಡತಿ, ಮಕ್ಕಳು ಕಾಲಿಗೆ ನೀರು ಹಾಕಿ ತೊಳೆಯುತ್ತಾರೆ. ಕುಟುಂಬದವರು ಬಂದು ತಲೆಗೆ ನೀರು ಹಾಕುತ್ತಾರೆ. ಮಡಿವಾಳಗಿತ್ತಿ ಹೆಣದ ಮೇಲಿನ ನೀರನ್ನು ಬೈರಾಸಿನಿಂದ ಒರಸಿ ತೆಗೆದು ಹೊಸ ಬಟ್ಟೆಯನ್ನು ಹೊದಿಸುತ್ತಾಳೆ. ಅಲ್ಲಿಂದ ಹೆಣವನ್ನು ಚಾವಡಿಗೆ ತಂದು ಕಚ್ಚೆ ಮುಂಡಾಸು ಹಾಕಿ ಶೃಂಗರಿಸುತ್ತಾರೆ. ಕೆಲವು ಗುತ್ತಿನಲ್ಲಿ ಅದರ ಛಾಯಾಪ್ರತಿ ಕೂಡ ತೆಗೆಯುತ್ತಾರೆ. ಅಲಂಕರಿಸಿದ ನಂತರ ಉತ್ತರ ದಿಕ್ಕಿಗೆ ತಲೆ, ದಕ್ಷಿಣ ದಿಕ್ಕಿಗೆ ಕಾಲು ಹಾಕಿಸಿ ಮಲಗಿಸಿ, ತಲೆಯ ಬಳಿ ಮತ್ತೆ ಅಕ್ಕಿಯ ರಾಶಿಯನ್ನೂ, ಕಾಲಿನ ಬಳಿ ಭತ್ತದ ರಾಶಿಯನ್ನೂ ಹಾಕಿ, ತೆಂಗಿನಕಾಯಿಯ ಗಡಿಯಲ್ಲಿ ತೆಂಗಿನ ಎಣ್ಣೆಯ ದೀಪ ಉರಿಸುತ್ತಾರೆ. ಕಂಚಿನ ತಂಬಿಗೆಯಲ್ಲಿದ್ದ ನೀರನ್ನು ತುಳಸಿ ಎಲೆಯ ಮೂಲಕ ಮೊದಲು ಕುಟುಂಬದವರು ಹೆಣದ ಬಾಯಿಗೆ ಬಿಡುತ್ತಾರೆ. ನಂತರ ಹೆಂಡತಿ, ಮಕ್ಕಳು ಹೆಣಕ್ಕೆ ಸುತ್ತುಬಂದು ನೀರು ಬಿಟ್ಟ ಬಳಿಕ ಊರವರು, ಒಕ್ಕಲಿನವರು ನೀರು ಬಿಡುವ ಕ್ರಮ ನಡೆಯುತ್ತದೆ. ಅಂಗಳದಲ್ಲಿ ಚಟ್ಟಕ್ಕೆ ಬಾಳೆಎಲೆ ಹಾಕಿ ಅದರ ಮೇಲೆ ಹೆಣವನ್ನು ಮಲಗಿಸುತ್ತಾರೆ. ಮನೆಯವರು, ಬೀಗರು ತಂದಿದ್ದ ಹೊಸ ಬಟ್ಟೆಯನ್ನು ಹೆಣದ ಮೇಲೆ ಹಾಕುತ್ತಾರೆ. ಒಂದು ಸೇರು ಅಕ್ಕಿ, ಒಂದು ತೆಂಗಿನಕಾಯಿಯನ್ನು ಬಟ್ಟೆಯಲ್ಲಿ ಕಟ್ಟಿ ಇಟ್ಟು, ಎಡಬಲ ಭಾಗಗಳಲ್ಲಿ ಬೆಳ್ತಿಗೆ ಅಕ್ಕಿ ಕಡೆದು ಮಾಡಿದ 'ಪಿಂಡ'ವನ್ನು ಬಾಳೆ ಎಲೆಯಲ್ಲಿ ಇಡುತ್ತಾರೆ. ಗುತ್ತಿನವರಾಗಲೀ, ಕೃಷಿಕರಾಗಲೀ, ಸಾಮಾನ್ಯವಾಗಿ ತಮ್ಮ ಗದ್ದೆಯಲ್ಲಿಯೇ ಚಿತೆಯನ್ನು ತಯಾರು ಮಾಡುತ್ತಾರೆ. ಹೊಸ ಮಡಕೆಯಲ್ಲಿ ಬೆರಣಿಯಿಂದ ಉರಿಸಿದ ಬೆಂಕಿಯನ್ನು ಹಿರಿಯಮಗ ಹಿಡಿದುಕೊಳ್ಳುತ್ತಾನೆ. ತಂಬಿಗೆಯಲ್ಲಿ ನೀರನ್ನು ಕಿರಿಯಮಗ ಹಿಡಿದುಕೊಳ್ಳುತ್ತಾನೆ. ಹಾಗೆಯೇ ಎಳನೀರನ್ನು ಬಾಕಿ ಮಕ್ಕಳಿದ್ದರೆ ಅಥವಾ ಬಂಧುಗಳು ಹಿಡಿದುಕೊಂಡು ಸಂಬಂಧಿಕರು ಚಟ್ಟವನ್ನು ಎತ್ತಿ ಹೆಗಲ ಮೇಲೆ ಇಟ್ಟುಕೊಂಡು ಚಿತೆಯ ಬಳಿಗೆ ನಡೆಯುತ್ತಾರೆ. ಚಿತೆಯನ್ನು ಹಸಿಮಾವಿನ ಮರದಿಂದ ಮಾಡಿರುತ್ತಾರೆ. ಹಾಗೆಯೇ ಅದಕ್ಕೆ ಬೇರೆ ಒಣಕಟ್ಟಿಗೆಯನ್ನೂ, ಗಂಧದ ತುಂಡನ್ನೂ ಸೇರಿಸಿರುತ್ತಾರೆ. ಹೆಣವನ್ನು ಚಿತೆಗೆ ಮೂರು ಸುತ್ತು ಅಪ್ರದಕ್ಷಿಣೆಯಾಗಿ ತಂದು ಚಿತೆಯ ಮೇಲಿಡುತ್ತಾರೆ. ಚಿತೆಯ ಮೇಲಿಟ್ಟ ಹೆಣಕ್ಕೆ ಕೊನೆಯದಾಗಿ ತುಳಸಿ ನೀರು ಬಿಟ್ಟು, ಹೆಣಕ್ಕೆ ಹಾಕಿದ ಹೊಸಬಟ್ಟೆಯನ್ನು ತೆಗೆದು ಕೆಲಸದವರಿಗೆ ಕೊಡುತ್ತಾರೆ. ನಂತರ ಇದನ್ನು ಅವರು ಚಿತೆಗೆ ಹಾಕಿಬಿಡುತ್ತಾರೆ. ಮೂರು ಸುತ್ತು ಬಂದು ಕೊಡದ ನೀರನ್ನು ಹಿಂದಿನ ಮಗ್ಗುಲಲ್ಲಿ ಸುರಿಯುತ್ತಾರೆ. ಹಿರಿಯ ಮಗನು, ಅಳಿಯನು ಚಿತೆಗೆ ಬೆಂಕಿಯನ್ನು ಕೊಡುತ್ತಾರೆ. ಕೊರಗರು ದೂರ ನಿಂತು ಮರಣದ ಡೋಲು ಬಾರಿಸುತ್ತಾರೆ. ಚಿತೆಯ ಹೆಚ್ಚಿನ ಭಾಗ ಉರಿದ ಮೇಲೆ ಮನೆಗೆ ಬಂದ ಕುಟುಂಬದವರಿಗೆ ಮಕ್ಕಳಿಗೆ ಕ್ಷೌರಿಕ ಕ್ಷೌರಮಾಡುತ್ತಾನೆ. ಮಡಿವಾಳ ಶುದ್ಧದ ನೀರು ಚಿಮುಕಿಸುತ್ತಾನೆ. ಗಂಡನನ್ನು ಕಳೆದುಕೊಂಡ ಹೆಂಗಸಾದರೆ ಓಲೆ, ಮಾಂಗಲ್ಯ, ಬಳೆಗಳನ್ನು

ತೆಗೆದಿರಿಸಿ, ಬಿಳಿ ಬಣ್ಣದ ಶೋಕ ಸೂಚಕ ಸೀರೆ ಉಟ್ಟು ದುಃಖದ ಕೋಣೆಗೆ ಹೋಗುತ್ತಾರೆ. ಮಡಿವಾಳಗಿತ್ತಿ ಕೋಣೆಗೆ ಬಂದು ಸೀರೆಯನ್ನು ಅಡ್ಡ ಕಟ್ಟುತ್ತಾಳೆ. ಶೋಕಿಸುತ್ತಾ ಕುಳಿತವರು, ಹೆಣಹೊತ್ತವರು ಎಲ್ಲಾ ಸ್ನಾನ ಮಾಡಿಬಂದು ಶೋಕದ ಗಂಜಿ, ಚಟ್ನಿಯ ಊಟವನ್ನು ಮಾಡುತ್ತಾರೆ.

ಹದಿಮೂರನೆಯ ದಿವಸ ಉತ್ತರ ಕ್ರಿಯೆಯನ್ನು ಮಾಡುತ್ತಾರೆ. ಗಂಡ ಸತ್ತ ಹೆಂಗಸಾದರೆ ಉಟ್ಟಬಟ್ಟೆಯಲ್ಲಿ ಬೊಜ್ಜದ ರಾತ್ರಿಯ ಊಟವಾದ ಮೇಲೆ ಗಂಡನ ಮನೆಯನ್ನು ಬಿಟ್ಟು ತವರು ಮನೆಗೆ ಹೋಗುವುದು ವಾಡಿಕೆ. ಮನಸ್ಸಿನ ನೋವು ಮರೆತುಹೋಗಲು ಈ ರೀತಿ ಮಾಡುವುದು ಸಂಪ್ರದಾಯ. ಅಳಿಯ ಸಂತಾನದ ಮನೆಗಳ ರೀತಿಯಲ್ಲಿ. ಗಂಡನ ಮನೆಬಿಟ್ಟು ಹೊರಡುವಾಗ ತನಗೆ ಇನ್ನೂ ಅಲ್ಲಿ ಏನು ಸಂಬಂಧವಿಲ್ಲ ಎಂದು ಸಂಬಂಧ ಕಡಿದು ಹೋಗುವವರೂ ಇದ್ದಾರೆ. ಸಂಬಂಧ ಉಳಿಸಿಕೊಂಡು ಮನೆಬಿಟ್ಟು ಹೋಗುವವರೂ ಇದ್ದಾರೆ. ಗುತ್ತಿನ ಮನೆಗಳಲ್ಲಿ ಸತ್ತ ದಿನದಿಂದ ಹದಿಮೂರನೇ ದಿನದ ತನಕ ನಡೆಯುವ ಈ ಸಂಪ್ರದಾಯದ ಕೆಲವು ಅಂಶಗಳು ತುಳು ನಾಡಿನ ಇತರ ಜನಾಂಗಗಳಲ್ಲಿಯೂ ಕಾಣಸಿಗುತ್ತದೆ.

ಮನೆಯ ಯಜಮಾನಿಕೆಯನ್ನು ನಡೆಸುವ, ಅಗತ್ಯ ಬಿದ್ದಾಗ ಕುಟುಂಬದ ಗೌರವಕ್ಕೋಸ್ಕರ ಯುದ್ಧವನ್ನು ಮಾಡಬಲ್ಲ ಮನೆಯೊಡತಿ, ಅಹಂಕಾರ, ದರ್ಪದಿಂದ ಮಾತ್ರ ಬೆರೆಯುವುದಲ್ಲ, ಆಕೆಯಲ್ಲೂ ಮಾತೃಹೃದಯವಿದೆ. ಗುತ್ತಿನೊಡತಿಯ ಕಾರುಬಾರಿನಲ್ಲಿ ಮನೆಯ ಸದಸ್ಯರು ಪಡುವ ಯಾತನೆ, ದುಃಖ, ನೋವು ಇದ್ಯಾವುದೂ ಗಮನಕ್ಕೆ ಬರುವುದಿಲ್ಲ. ಇದ್ದೂ ಇಲ್ಲದಂತೆ ಆಗಿಬಿಡುವ ಅವರ ಬದುಕು ತೀರಾ ನೋವನ್ನನುಭವಿಸುತ್ತದೆ. ಆದರೆ ಆಕೆಯಲ್ಲೂ ಮಾನವೀಯತೆ ಇದೆ, ತಾಯಿ ಕರುಳು ಇದೆ, ಅದೂ ಕೂಡ ದುಃಖವನ್ನು ಅನುಭವಿಸುತ್ತದೆ. ಇನ್ನೊಬ್ಬರ ಕಷ್ಟವನ್ನು ಅರಿತು ಸಹಾಯ ಮಾಡುವ ಗುಣ ಗುತ್ತಿನೊಡತಿಯಲ್ಲಿ ಇದೆ.

ಬಾರೆಬೈಲಿನ ಮನೆ, ಕೊಟ್ಟಿಗೆ, ಹಟ್ಟಿಯನ್ನು ನಾಶಮಾಡಿ ಮನೆಯ ಹೆಂಗಸರು, ಮಕ್ಕಳನ್ನು ದಿಕ್ಕುಪಾಲು ಮಾಡಿಬಿಟ್ಟಿದ್ದಾರೆ. ಆರು ತಿಂಗಳ ಬಳಿಕ ಬಲವಾದ ಸಾಕ್ಷಿ ಇಲ್ಲದೆ ನಿರಪರಾಧಿಯಾಗಿ ಯಮುನಕ್ಕ ಮಿತ್ತಬೈಲಿಗೆ ಬರುತ್ತಾರೆ. ಜೈಲಿನಿಂದ ಬಂದ ಬಳಿಕ ಅಂಗಳಕ್ಕೂ ಇಳಿಯದ ಯಮುನಕ್ಕ ಒಂದು ದಿನ ಸುಬ್ಬಯಣ್ಣನಲ್ಲಿ ಬಾರೆಬೈಲಿಗೆ ಹೋಗುವ ಆಸೆಯನ್ನು ಮುಂದಿಡುತ್ತಾರೆ. ಬೆಳಗಿನ ಜಾವ ಸುಬ್ಬಯಣ್ಣನ ಜೊತೆ ಬಾರೆಬೈಲಿಗೆ ಬಂದ ಯಮುನಕ್ಕ, ಹಿಂದೆ ಬಾರೆಬೈಲಿನ ಮನೆಯ ಅಂಗಳದಲ್ಲಿದ್ದ ಹಲಸಿನಮರದ ಬುಡದಲ್ಲಿ ಕುಳಿತುಕೊಂಡರು. ಹಳೆಯ ನೆನಪುಗಳು ಮನಸ್ಸಿನಲ್ಲಿ ಮೂಡಿ ಕಣ್ಣೀರು

ಧಾರೆಧಾರೆಯಾಗಿ ಬರಲಾರಂಭಿಸಿತು. ''ಹೋಗೋಣವೇ ಯಮುನಕ್ಕಾ?'' ಎಂದು ಸುಬ್ಬಯಣ್ಣ ಕೇಳಿದಾಗ ತಮ್ಮನ ಕೈಹಿಡಿದು ಬಿಕ್ಕಿಬಿಕ್ಕಿ ಅಳತೊಡಗಿದರು. ತಮ್ಮನ ಕೈಯನ್ನು ಹಿಡಿದುಕೊಂಡು, ''ಮಿತ್ತಬೈಲು-ಬಾರೆಬೈಲುಗಳಿಗೆ ಯಮುನಕ್ಕನೆಂಬ ಒಂದು ಮಾರಿ ನುಗ್ಗಿ ಊರಿಗೆ ಊರನ್ನೇ ಬಲಿತೆಗೆದುಕೊಂಡಿತು ಅಲ್ಲವೇ ಸುಬ್ಬಯಾ? ನಾನು ನಿನ್ನ ಮಾತು ಕೇಳಲಿಲ್ಲ ಅಲ್ಲವೇ?''[೧] ಎಂದು ನಡೆದುಹೋದ ಘಟನೆಯ ಬಗ್ಗೆ ಮಾನಸಿಕವಾಗಿ ನೊಂದುಕೊಂಡರು. ದೇಹಕ್ಕೆ ಕಾಡುತ್ತಿರುವ ವೃಧ್ಯಾಪ್ಯ ಮನಸ್ಸಿಗೆ ಆಗಿರುವ ನೋವು ಇದೆಲ್ಲವೂ ಯಮುನಕ್ಕನಿಗೆ ಆಘಾತವನ್ನುಂಟುಮಾಡಿತು. ಆಚಕ್ಕನನ್ನೂ ಅವರ ಮಕ್ಕಳನ್ನೂ ಎಲ್ಲಿದ್ದರೂ ಹುಡುಕಿ ತರಬೇಕು ಎಂದು ಸುಬ್ಬಣ್ಣನಿಗೆ ತಿಳಿಸುತ್ತಾರೆ. ಉಪ್ಪಿನಂಗಡಿಯ ಕುಟುಂಬದ ಮನೆಯಲ್ಲಿರುವ ಆಚಕ್ಕನನ್ನು ಎಷ್ಟೇ ಒತ್ತಾಯ ಮಾಡಿದರೂ ಮಿತ್ತಬೈಲಿಗಾಗಲೀ, ಬಾರೆಬೈಲಿಗಾಗಲೀ ಬರಲು ಒಪ್ಪಲಿಲ್ಲ. ಆಚಕ್ಕನ ಬಾಯಿಂದಲೇ ಕೆಲವು ರಹಸ್ಯ ವಿಷಯವೂ ಸಿಕ್ಕಿತು. ಯಮುನಕ್ಕನ ಮಗ ರಾಮಣ್ಣನಿಗೂ ತ್ಯಾಂಪಣ್ಣನ ತಂಗಿ ಕಲ್ಯಾಣಿಯ ಮಗಳು ಸುಂದರಿಗೂ ಪ್ರೇಮವಿತ್ತು ಎನ್ನುವ ವಿಷಯ ಗೊತ್ತಾಯಿತು. ಒಂದು ಬದಿಯಲ್ಲಿ ಕುಟುಂಬವನ್ನೇ ಸರ್ವನಾಶ ಮಾಡಲು ಹೊರಟಿರುವ ಕೋಪ, ಇನ್ನೊಂದು ಬದಿಯಲ್ಲಿ ಆ ಕೋಪವನ್ನೆಲ್ಲಾ ಮರೆತು ಪ್ರೀತಿಸುವ ಮುಗ್ಧ ಹೃದಯಗಳು. ಆದರೆ ಯಮುನಕ್ಕನ ಭಯದಿಂದಾಗಿ ತಾಯಿ ಮಗಳಿಬ್ಬರನ್ನೂ ಆಚಕ್ಕ ಗಟ್ಟಕ್ಕೆ ಕಳುಹಿಸಿದ್ದರು.

ಸುಬ್ಬಯಣ್ಣನಿಗೆ ಇದು ಹೊಸ ವಿಷಯವಾದರೆ ಯಮುನಕ್ಕನಿಗೆ ಇದು ಹಳೆಯ ವಿಷಯ. ಮೊದಲೇ ತಿಳಿದಿದ್ದ ಆ ಕುಟುಂಬವನ್ನು ಸರ್ವನಾಶ ಮಾಡಲು ಯಮುನಕ್ಕ ಹೊರಟಿದ್ದಾರೆ. ಕ್ರೂರಿಯಂತೆ ಕಂಡುಬರುವ ಯಮುನಕ್ಕ ಮಾತೃಹೃದಯದ ಪರಿಣಾಮವಾಗಿ ಸುಬ್ಬಯಣ್ಣನಲ್ಲಿ, ಸುಂದರಿಯನ್ನು ಹುಡುಕಿ ರಾಮಣ್ಣನಿಗೆ ಮದುವೆ ಮಾಡಿಸಲು ತಿಳಿಸುತ್ತಾಳೆ. ಎಂಥವರಿಗೂ ಆಶ್ಚರ್ಯವಾಗುವ ವಿಷಯದ ಹಾಗೆ ಯಮುನಕ್ಕನ ಯಾತನೆಯ ಚಿತ್ರಣವಿದೆ. ಗಟ್ಟದಿಂದ ಸುಬ್ಬಯಣ್ಣ ಕಲ್ಯಾಣಿಯನ್ನು ಹಾಗೂ ಸುಂದರಿಯನ್ನು ಕರೆದುಕೊಂಡು ಬರುತ್ತಾರೆ. ಇಬ್ಬರನ್ನು ತನ್ನ ಹತ್ತಿರ ಕುಳ್ಳಿರಿಸಿಕೊಂಡ ಯಮುನಕ್ಕ ತನ್ನ ಸೊಂಟದಲ್ಲಿದ್ದ ಚಿನ್ನದ ಉಡಿದಾರ ತೆಗೆದು ಸುಂದರಿಯ ಕೈಗೆ ಕೊಟ್ಟು ಸೊಂಟಕ್ಕೆ ಹಾಕಿಕೊಂಡು ಬರುವಂತೆ ತಿಳಿಸುತ್ತಾರೆ. ಯಮುನಕ್ಕನ ಅತ್ತೆಯಿಂದ ಯಮುನಕ್ಕನಿಗೆ ಸಿಕ್ಕಿರುವ ಉಡಿದಾರ, ಯಮುನಕ್ಕ ಅತ್ತೆಯಾದಾಗ ಮತ್ತೆ ತನ್ನ ಸೊಸೆಗೆ ನೀಡಿ ಅದುವರೆಗಿನ ಕಲಹಕ್ಕೆ ಅಂತಿಮವನ್ನ ಹಾಕುತ್ತಾಳೆ. ಸಂಘರ್ಷದ ದಾರಿಯನ್ನು ಬಿಟ್ಟು ಶಾಂತಿಯ ಬದುಕನ್ನು ಬಾಳಲು ಯಮುನಕ್ಕ ಕೊನೆಗೆ ಈ ಮೂಲಕ ಸಂದೇಶ ನೀಡುತ್ತಾಳೆ. ಸರ್ವವನ್ನೂ ನಾಶಮಾಡುವುದರಿಂದ ಏನನ್ನೂ ಪಡೆಯಲು ಸಾಧ್ಯವಿಲ್ಲ ಎಂದು ಯಮುನಕ್ಕನಿಗೆ ಮನವರಿಕೆಯಾಗಿ ತನ್ನ

---

೧ ಮಹಮ್ಮದ್ ಕುಳಾಯಿ - ಮಿತ್ರಬೈಲ್ ಯಮುನಕ್ಕ - ಪು.ಸಂ. ೨೦೨

ಮಗನ ಮದುವೆಯನ್ನು, ತನ್ನ ವೈರಿಯಾದ ತ್ಯಾಂಪಣ್ಣನ ತಂಗಿಯ ಮಗಳೊಂದಿಗೆ ನೆರವೇರಿಸುತ್ತಾಳೆ. ಸಾಮಾಜಿಕ ಸಾಮರಸ್ಯವನ್ನು ಯಮುನಕ್ಕ ಅನುಸರಿಸುವುದರ ಮೂಲಕ ಗುತ್ತು ಸಂಸ್ಕೃತಿಯ ವಿಶೇಷತೆಯನ್ನು ತಿಳಿಸುತ್ತದೆ. ಅಧಿಕಾರ ಬಲದಿಂದ ಏನು ಬೇಕಾದರೂ ಸಾಧಿಸಬಲ್ಲೆ ಎನ್ನುವ ಕ್ರಮದಲ್ಲಿದ್ದ ಯಮುನಕ್ಕ ತನ್ನ ಬಾಳ ಮುಸ್ಸಂಜೆಯಲ್ಲಿ, ತಾನು ಮಾಡಿರುವ ಕೆಲಸಗಳ ಬಗ್ಗೆ ಪಶ್ಚಾತ್ತಾಪ ಪಡುತ್ತಾರೆ. ಗುತ್ತಿನ ಮನೆಗಳಲ್ಲಿ ಈ ರೀತಿಯ ಕ್ರಮಗಳು ಸಾಮಾನ್ಯ. ಒಕ್ಕಲು ಮತ್ತು ದಣಿಗಳ ನಡುವಿನ ಘರ್ಷಣೆ ಆದರಲ್ಲಿ ಧಣಿಗೆ ಜಯ. ಇದು ಸ್ವಾಭಾವಿಕ ಆದರೆ ಮತ್ತೆ ಪಶ್ಚಾತ್ತಾಪ ಪಟ್ಟು ಅವರಿಗೆ ಆಸರೆಯನ್ನು ಕೊಡುವುದು ದೊಡ್ಡ ಗುಣ.

ಸಮಾಜದಲ್ಲಿ ಅಧಿಕಾರ, ಗೌರವ, ಜನಬೆಂಬಲವನ್ನು ಪಡೆದ ಗುತ್ತು ಸಾಮಾಜಿಕ ವ್ಯವಸ್ಥೆಗಳ ಮೇಲೆ ತನ್ನ ಹಿಡಿತವನ್ನು ಇಟ್ಟುಕೊಂಡಿದೆ. ಗ್ರಾಮದ ಎಲ್ಲಾ ಕಾರ್ಯಗಳಲ್ಲಿ ಭಾಗಿಯಾಗಿ ರೀತಿ, ನೀತಿ, ಸಲಹೆಯನ್ನು ಕೊಡುವ ಕಾರಣ ಸ್ವಾಭಾವಿಕವಾಗಿಯೇ ಗುತ್ತಿನ ಬಗ್ಗೆ ಗೌರವ ಬಂದುಬಿಡುತ್ತದೆ. ಅವರ ಮಾತಿಗೆ ಪ್ರತಿಮಾತು ಯಾರಿಂದಲೂ ಬರುವುದಿಲ್ಲ, ಒಂದು ವೇಳೆ ಬಂದರೆ ಅವರನ್ನು ನಾಶಮಾಡುವ ಮಟ್ಟಕ್ಕೂ ಹೋಗುತ್ತಾರೆ. ತಮಗಿಂತ ಮೇಲೆ ಯಾರು ಬೆಳೆಯದಂತೆ, ಸ್ಪರ್ಧೆ ನೀಡದಂತೆ ನೋಡಿಕೊಂಡು ಆ ಮೂಲಕ ಸಾಮಾಜಿಕವಾಗಿ ಗುತ್ತು ಸಂಸ್ಕೃತಿಯನ್ನು ಶ್ರೀಮಂತಗೊಳಿಸುವ ಕೆಲಸವು ನಡೆದಿದೆ.

### ೪.೨: ಧಾರ್ಮಿಕ ಭಾವನೆಗಳು

ಧರ್ಮ ಜಾತಿಯ ಕಟ್ಟುಪಾಡುಗಳನ್ನು ಗುತ್ತು ಕ್ರಮಪ್ರಕಾರವಾಗಿ ನಿಷ್ಠೆಯಿಂದ ಮಾಡುತ್ತದೆ. ಧಾರ್ಮಿಕ ಒಲವು ಸಮಾಜದ ಮೇಲೆ, ಸಂಸ್ಕೃತಿಯ ಮೇಲೆ ಪರಿಣಾಮವನ್ನು ಬೀರುತ್ತದೆ. ಸಾಮಾಜಿಕ ಶ್ರೇಣೀಕೃತ ವ್ಯವಸ್ಥೆಯಲ್ಲಿ ಬ್ರಾಹ್ಮಣರಿಗಿಂತ ನಂತರ ಬಂಟರು ಬರುತ್ತಾರೆ. ಬಂಟರು ಅಂದರೆ ಅಲ್ಲಿ ಗುತ್ತಿನ ಮನೆಗಳಿಗೆ ವಿಶೇಷ ಪ್ರಾಶಸ್ತ್ಯ. ತುಳುನಾಡಿನ ಸಮಾಜದ ತಾತ್ವಿಕ ಹಾಗೂ ಸಾಮಾಜಿಕ ಚೌಕಟ್ಟು ಪ್ರಾಚೀನ ಧಾರ್ಮಿಕ ಆಚರಣೆಗಳ ಮೇಲೆ ನಿಂತಿದೆ. ಬೌದ್ಧಿಕ ಸಾಮರ್ಥ್ಯದ ಮೇಲಿರುವ ಈ ವಿಭಾಗ ಕ್ರಮವು ಕೆಲವರನ್ನು ಶ್ರೀಮಂತರನ್ನಾಗಿ, ಇನ್ನುಳಿದವರನ್ನು ಬಡವರನ್ನಾಗಿ ಮಾಡುತ್ತಿತ್ತು. ಬೌದ್ಧಿಕ ಸಾಮರ್ಥ್ಯದ ಬ್ರಾಹ್ಮಣರಾಗಲೀ, ಗುತ್ತಿನವರಾಗಲೀ ಅವರು ಹೇಳುವುದು, ಆಚರಿಸುವುದು, ಧರ್ಮದ ಕ್ರಮಗಳಾಗಿ ಪರಿವರ್ತನೆಯಾಯಿತು. ಆರ್ಥಿಕವಾಗಿ ದುರ್ಬಲರಾಗಿರುವವರು ಇದನ್ನು ಮರು ಮಾತಿಲ್ಲದೆ ಅನುಸರಿಸುವ ಸಂದರ್ಭ ಸೃಷ್ಟಿಯಾಯಿತು. ಊರಿನ ದೈವಸ್ಥಾನ, ದೇವಸ್ಥಾನದ ಅಧಿಕಾರ ಹೆಚ್ಚಿನ ಕಡೆ

ಗುತ್ತಿನವರಿಗಿದೆ. ಬ್ರಾಹ್ಮಣರು ಜಾತಿ ವ್ಯವಸ್ಥೆಯಲ್ಲಿ ಮೇಲಿದ್ದರೂ ಅವರು ಈ ರೀತಿಯ ಅಧಿಕಾರಕ್ಕಾಗಿ ಪೈಪೋಟಿ ನಡೆಸಿಲ್ಲ. ಅಧಿಕಾರವನ್ನು ಪಡೆದಿರುವ ಗುತ್ತು ಧಾರ್ಮಿಕವಾಗಿ ವಿಶೇಷ ಒಲವನ್ನು ಪಡೆದು ಜಾತಿ, ಕುಲ, ಸಮಾಜದ ಆಚರಣೆಯನ್ನು ಕ್ರಮಪ್ರಕಾರವಾಗಿ ಮುಂದುವರಿಸತೊಡಗಿತು. ಪ್ರತಿಯೊಂದು ಗುತ್ತಿಗೂ ಒಂದು ಮೂಲದೈವವಿರುತ್ತದೆ. ಮೂಲದೈವಕ್ಕೆ ಪ್ರಾರ್ಥನೆ ಸಲ್ಲಿಸದೆ ಯಾವುದೇ ಕೆಲಸವನ್ನು ಕೈಗೊಳ್ಳುತ್ತಿರಲಿಲ್ಲ. ಮೂಲದೈವದ ಆ ಕೃಪೆ ಬೇಕು ಎನ್ನುವ ಕಾರಣದಿಂದಾಗಿ ಗುತ್ತಿನ ಚಾವಡಿಯಲ್ಲಿ ದೈವದ ಉಯ್ಯಾಲೆ ಇರುತ್ತಿತ್ತು. ಈಗ ಅದನ್ನು ಪ್ರತ್ಯೇಕ ಭೂತಸ್ಥಾನಕ್ಕೆ ವರ್ಗಾವಣೆ ಮಾಡಿಕೊಂಡಿದ್ದಾರೆ. ಚಾವಡಿಯಲ್ಲಿ ದೈವದ ಭಂಡಾರವಿರುವ ಕಾರಣ ಅಲ್ಲಿ ಮಡಿಮೈಲಿಗೆಯನ್ನು ನೋಡಿಕೊಳ್ಳುತ್ತಾರೆ. ಈ ಕಾರಣದಿಂದಾಗಿ ಸ್ವಾಭಾವಿಕವಾಗಿಯೇ ಚಾವಡಿಯ ದೈವದ ಬಗೆಗೆ ಭಯವನ್ನು, ನಂಬಿಕೆಯನ್ನು ಸೃಷ್ಟಿಮಾಡಿಕೊಂಡಿದ್ದಾರೆ. ಗುತ್ತಿನ ಮನೆಯ ಒಡೆಯನು ಮನೆದೈವವನ್ನು ಪೂರ್ವಪರಂಪರೆಯ ಪ್ರಕಾರ ಪೂಜಿಸಬೇಕು. ಇದಕ್ಕಾಗಿ ಪುರೋಹಿತರನ್ನು ಕರೆಯುವ ಪದ್ಧತಿಯಿಲ್ಲ. ಮನೆಯ ಯಜಮಾನ ಶುದ್ಧವಾಗಿ ದೈವದ ಭಂಡಾರಕ್ಕೆ ಹೂವನ್ನಿಟ್ಟು ದೀಪವನ್ನು ಬೆಳಗಿಸಿ ಪ್ರಾರ್ಥಿಸುತ್ತಾರೆ. ಮನೆದೈವವು ಕೋಪಿಸಿಕೊಂಡರೆ ಯಾವುದೇ ಕೆಲಸವು ಆಗುವುದಿಲ್ಲ. ಆದ್ದರಿಂದ ಮನೆದೈವದ ಅನುಗ್ರಹ ಮುಖ್ಯ ಎಂದು ಭಾವಿಸಿದ್ದರು. ಕಾದಂಬರಿಯಲ್ಲಿಯೂ ಮನೆದೈವದ ಶಕ್ತಿ ತಿಳಿದುಬರುತ್ತದೆ. ಮಿತ್ತಬೈಲ್‌ನಲ್ಲಿ ಮನೆಕಟ್ಟಲು ಮಜಲೋಡಿಯಿಂದ ಚಾವಡಿಯ ಕಂಬಗಳನ್ನು ತರಲು ಎಷ್ಟೇ ಪ್ರಯತ್ನ ಪಟ್ಟರೂ ಮಿಸುಕಾಡಿಸಲೂ ಸಾಧ್ಯವಾಗಲಿಲ್ಲ. ಮಿಸುಕಾಡದ ಕಂಬವನ್ನು ನೋಡಿ ಸುಬ್ಬಾಳ್ವರು ಮಂಜಣನನ್ನು ಕರೆದು, ಸಂಕಮಕ್ಕನನ್ನು ಕರೆಯಿಸಿ ತನ್ನ ಸಂಶಯವನ್ನು ಹೇಳಿದರು. ಮರುದಿನ ಬೆಳಗ್ಗೆ ಮಲರಾಯ ಭೂತದ ಪಾತ್ರಿಯನ್ನು ಕರೆಸಿದರು. ಕುಟುಂಬ, ಊರಿನವರ ಮುಂದೆ ಭೂತವನ್ನು ಪಾತ್ರಿಯ ಮೈಮೇಲೆ ಆವಾಹಿಸಿ ಮಜಲೋಡಿಯ ಮಣ್ಣಿನಿಂದ ಹಲಸಿನ ಕಂಬವನ್ನು ಕೊಂಡೊಯ್ಯಲು ಅಪ್ಪಣೆ ಕೊಡಬೇಕೆಂದು ಪ್ರಾರ್ಥಿಸಿದರು. ಮಲರಾಯ ದೈವ ಬಂದು "ಮಜಲೋಡಿಯ ನನ್ನ ಸಂಸಾರ ಬಹಳ ದೊಡ್ಡ ಸಂಸಾರ, ನನ್ನ ಸಂಸಾರದ ಕುಡಿಯೊಂದನ್ನು ಮಿತ್ತಬೈಲಿಗೆ ಕೊಂಡು ಹೋಗಬೇಕೂಂತ ನಿಮ್ಮ ಆಸೆಯಲ್ಲವೇ? ದೇಶಾಂತರ ಹೋದ ಸಂಸಾರ, ಹೆತ್ತ ತಾಯಿಯಂತಿರುವ ಸತ್ಯ ನನ್ನನ್ನು ನಂಬಿಕೊಂಡವರಿಗೆ ವೀಳ್ಯ ನೀಡಿ ಅಪ್ಪಣೆ ಕೊಟ್ಟಿದ್ದೇನೆ. ಈಗ ನನ್ನನ್ನು ಬರಮಾಡಿಕೊಂಡ ಕಾರ್ಯವೇನು? ಎಂದು ಕೇಳಿದಾಗ – ಮಜಲೋಡಿಯಿಂದ ಮಿತ್ತಬೈಲಿಗೆ ಕೊಂಡು ಹೋಗಲು ಇಟ್ಟಿರುವ ಕಂಬಗಳು ಅಂಗಳದಿಂದ ನಿನ್ನ ಗುಡಿ ದಾಟಲು ಒಪ್ಪಲಿಲ್ಲ. ನಮ್ಮ ಮೇಲೆ ಏನೋ ಅಸಮಾಧಾನ ಇದೆ ನಮ್ಮನ್ನು ಕ್ಷಮಿಸಿ ಕೈಹಿಡಿದ ಕೆಲಸವನ್ನು ಮಾಡಿಸಿಕೊಡು ಎಂದು ಬೇಡುತ್ತಾರೆ. ಆಗ ಭೂತವು ಗುತ್ತಿನ ಸಂತಾನ ಮಿತ್ತಬೈಲಿನಲ್ಲಿ ಬೀಡುಕಟ್ಟಿಸಿ

ಕಾರ್ಯಾವಳಿ ಸೀಮೆಗೊಂದು ಗುತ್ತು ನೀಡಬೇಕೆಂದು ಮೆರೆಸಬೇಕೆಂದಿದೆ. ಬೀಡು ಬೇಕು ಬೀಡಿನ ದೈವ ಬೇಡವೇ? ಎಂದು ಕೇಳಿ, ನನ್ನ ಸಂಸಾರ ತನಗಾಗಿ ಬೀಡು ಕಟ್ಟಿಸುವಾಗ ನನಗೊಂದು ಗುಂಡ ಕಟ್ಟಿಸಲು ನೆನಪಾಗಲಿಲ್ಲ ಅಲ್ಲವೇ? ಎಂದು ಪ್ರಶ್ನಿಸುತ್ತದೆ.'' ಅದೇ ರೀತಿಯಲ್ಲಿ ಮಜಲೋಡಿಯ ಮಲರಾಯ ದೈವ ಮಿತ್ತಬೈಲಿಗೂ ಒಂದು ಅಲ್ಲಿ ಕುಟುಂಬದ ದೈವವಾಗಿ ನಿಲ್ಲುತ್ತದೆ.

ಕೌಟುಂಬಿಕ ವ್ಯವಸ್ಥೆಯನ್ನು ಹಿಡಿತದಲ್ಲಿಟ್ಟು ಕೊಳ್ಳಲು ಮನೆದೈವದ ಹೆಸರು ಪ್ರಮುಖವಾಗಿದೆ. ಅದರ ಮೂಲಕ ತಮ್ಮ ತಮ್ಮೊಳಗೆ ಇರುವ ವೈಮನಸ್ಸು, ಅಸೂಯೆಯನ್ನು ದೈವದ ಭಯದಿಂದಾಗಿ ಹೊರಗೆಡಹಲು ಸಾಧ್ಯವಾಗುವುದಿಲ್ಲ. ಇದರಿಂದಾಗೆ ಕುಟುಂಬದಲ್ಲಿ ಒಗ್ಗಟ್ಟು, ಕೂಡಿಬಾಳುವ ಸ್ವಭಾವ ಬೆಳೆಯಿತು. ಮನೆದೈವದ ಅನುಗ್ರಹಬೇಕು ಎನ್ನುವ ನಿಟ್ಟಿನಲ್ಲಿ ಎಲ್ಲರೂ ಸೇರುವ, ಒಂದೇ ಮನಸ್ಸಿನಿಂದ ದುಡಿಯುವ ಮನಸ್ಥಿತಿ ಬರುತ್ತದೆ. ಆ ದೈವಕ್ಕೆ ಸಂಕ್ರಮಣದಂದು ಹೂವನ್ನಿಟ್ಟು ಪೂಜೆ ಮಾಡುವ ಕ್ರಮವಿದೆ. ಇದನ್ನೂ ಗುತ್ತಿನ ಯಜಮಾನ ಮಾಡುತ್ತಾನೆ. ತುಳುನಾಡಿನ ಇತರ ಜನಾಂಗದವರೂ ಭೂತಗಳಿಗೆ ಇದೇ ರೀತಿಯ ಕ್ರಮವನ್ನು ಅನುಸರಿಸುತ್ತಾರೆ. ಸಂಕ್ರಮಣದಂದು ಹೂ ಹಾಕಿ ಪೂಜೆಯನ್ನು ಮಾಡುವ ಅಧಿಕಾರವು ಆ ಕುಟುಂಬದ ಹಿರಿಯನಿಗೆ ಬರುವುದು ರೂಢಿ. ಇದನ್ನು ಆತ ಬಹಳ ಗೌರವದಿಂದ, ಪೂಜ್ಯಭಾವನೆಯಿಂದ ಮಾಡುತ್ತಾನೆ.

ಮನೆಯಲ್ಲಿ ಹೊಸ ಅಕ್ಕಿ ಊಟ ಮಾಡಿದಂತೆ ಭೂತಗಳಿಗೂ ಹೊಸಅಕ್ಕಿಯ ಊಟದ ಕ್ರಮವನ್ನು ಮಾಡುತ್ತಾರೆ. ಮಧ್ಯಾಹ್ನದ ಹೊಸ ಅಕ್ಕಿಯ ಊಟ ಆದ ಮೇಲೆ ಮನೆದೈವಕ್ಕೆ ಪುದ್ವಾರ್‌ದೆಚ್ಚಿ ನೇಮದ ಸಂಪ್ರದಾಯವಿದೆ. ಹೊಸ ಅಕ್ಕಿಯ ಊಟದ ರಾತ್ರಿ ಮರು ಹೊಸಅಕ್ಕಿ ಊಟ ಎನ್ನುವ ಕ್ರಮವಿದೆ. ಇದು ಮಾಂಸಾಹಾರವನ್ನು ಮಾಡುವ ಕ್ರಮದಿಂದಾಗಿ ಸೃಷ್ಟಿಯಾದರು. ಕಡಲೆ ಮತ್ತು ಬಲ್ಯಾರ್ ಮೀನಿನ ಗಸಿ ಮತ್ತು ಕೋಳಿಮಾಂಸದ ಊಟ ಇದರ ವಿಶೇಷ. ಈ ಊಟ ಆದ ಮೇಲೆ ನೇಮ ಆರಂಭವಾಗುತ್ತದೆ. ಗುತ್ತಿನ ಮನೆಯಲ್ಲಿ ಅಡುಗೆ ಮಾಡಲು ಕೂಡ ನಿರ್ದಿಷ್ಟವಾದ ಮನೆಯವರೇ ಬೇಕು. ಅದು ಅವರ ಹಕ್ಕಾಗಿದೆ. ಗುತ್ತಿನ ಮನೆಯವರಿಗೆ ಹಾಗೂ ಮನೆದೈವಕ್ಕೆ ಒಂದೇ ದಿವಸ ಹೊಸ ಅಕ್ಕಿಯ ಊಟದ ಕ್ರಮವನ್ನು ಮಾಡುವುದು ಕೆಲವು ಕಡೆ ಇದ್ದರೆ, ಇನ್ನು ಕೆಲವು ಕಡೆಗಳಲ್ಲಿ ಅವುಗಳು ಪ್ರತ್ಯೇಕ ಪ್ರತ್ಯೇಕವಾಗಿ ನಡೆಯುತ್ತದೆ. ನೇಮ ಇಲ್ಲದೆಯು ಮನೆದೈವಕ್ಕೆ ಹೊಸ ಅಕ್ಕಿಯ ಊಟದ ವಿಧಾನವನ್ನು ಮಾಡುತ್ತಾರೆ.

ಪುದ್ವಾರ್‌ದೆಚ್ಚಿ ನೇಮದ ಪ್ರಯುಕ್ತ ತುಳುನಾಡಿನ ಹಾಗೂ ಗುತ್ತಿನ ಮನೆಗಳ ವಿಶೇಷ ಆಕರ್ಷಣೆಯಾದ ಜನಪದ ಕ್ರೀಡೆ ಕೋಳಿ ಅಂಕ ನಡೆಯುವುದು ಸ್ವಾಭಾವಿಕ. ಗುತ್ತಿನ ಯಜಮಾನರು ಮತ್ತು ಕೋಳಿ ಅಂಕದ ನಡುವೆ ಒಂದು ಸಂಬಂಧವಿದೆ. ತಮ್ಮ ಅಧಿಕಾರ, ಮಾತು ನಡೆಯುವ ಸ್ಥಳಗಳಲ್ಲಿ ಕೋಳಿ ಅಂಕವು ಒಂದು ಕೋಳಿ ಮಾಂಸ ಮತ್ತು ಜೂಜಿನ ಆಸೆಯಿಂದಾಗಿ ಇಂದು ಪ್ರತಿಯೊಂದು ಜಾತ್ರೆ, ಉತ್ಸವಗಳ ಮರುದಿವಸ ಕೋಳಿ ಅಂಕ ಇದ್ದೇ ಇದೆ. ಆದ್ದರಿಂದ ಈ ಒಂದು ಜನಪದ ಕ್ರೀಡೆ ಅಳಿಸಿಹೋಗದೆ, ಅಥವಾ ಅಭಿಮಾನಗಳ ಕೊರತೆ ಕಾಣದೆ ಯಶಸ್ವಿಯಾಗಿದೆ. ತುಳುವರ ಆದಿ ದೈವ ಬ್ರಹ್ಮೆರ್‌ರ ಧ್ವಜದಲ್ಲಿಯೂ ಕೋಳಿಯ ಚಿತ್ರವಿದೆ. ಜಾತ್ರೆ, ಉತ್ಸವ ಆದ ಕಡೆ ಭೂಮಿಗೆ ರಕ್ತ ಬೀಳಬೇಕು ಎಂದು ಕೋಳಿ ಅಂಕವನ್ನು ನಡೆಸುತ್ತಾರೆ. ಪುದ್ವಾರ್‌ದೆಚ್ಚಿ ನೇಮದ ಮರುದಿನ ದೂರದಿಂದ ಬಂದಿರುವ ಬಂಧುಗಳ, ಕೆಲಸ ಕಾರ್ಯಕ್ಕೆ ದೂರದೂರಿಗೆ ಹೋಗಿದ್ದ ಕುಟುಂಬದವರ ಸುಖದುಃಖಗಳನ್ನು ವಿಚಾರಿಸಿ ಕಷ್ಟದಲ್ಲಿದ್ದವರಿಗೆ ಸಹಾಯ ಮಾಡಿ, ದೂರು ತಂದವರನ್ನು ಸಮಾಧಾನಮಾಡಿ ಕಳುಹಿಸುವುದು ಗುತ್ತಿನ ಕ್ರಮ.

ಗುತ್ತಿನ ಇನ್ನೊಂದು ಪ್ರಮುಖ ಕ್ರೀಡೆ ಕಂಬಳ. ಇದು ಕೇವಲ ಮನೋರಂಜನೆಯ ಚಟುವಟಿಕೆ ಮಾತ್ರವೇ ಅಲ್ಲ. ಸಾಮಾಜಿಕ, ಆರ್ಥಿಕ ಆಯಾಮವುಳ್ಳದ್ದು. ಹಿಂದೆ ತುಳುನಾಡಿನ ಗುತ್ತಿನ ವಿಶಾಲವಾದ ಗದ್ದೆಯನ್ನು ಹದಮಾಡಿ ಕೋಣಗಳನ್ನು ಓಡಿಸುವ ಕ್ರೀಡೆಯೇ ಕಂಬಳ. ಇದು ಸುಗ್ಗಿಬೆಳೆ ತೆಗೆದಾದ ನಂತರ ಕೊಳಕೆ ಬೆಳೆ ನಡುವ ಮೊದಲು ಭೂಮಿದೇವಿಯನ್ನು ಸಂತೃಪ್ತಿಗೊಳಿಸಲು ನಡೆಸುವ ಉತ್ಸವವಾಗಿತ್ತು. ಆದರೆ ಇಂದು ಇದು ಗದ್ದೆಯನ್ನು ಹೊರತುಪಡಿಸಿ ಬೇರೆ ಸ್ಥಳಗಳಲ್ಲಿಯೂ ಸರಕಾರದ ವತಿಯಿಂದ ನಡೆಯುವ ಮಟ್ಟಕ್ಕೆ ಬಂದುಬಿಟ್ಟಿದೆ. ಕಂಬಳದ ಗದ್ದೆಯಲ್ಲಿ ಹಿಂದೆ ನಟ್ಟಿಯನ್ನು ಮಾಡುವ ಉದ್ದೇಶದಿಂದಾಗಿ ಕಂಬಳವನ್ನು ನಡೆಸುತ್ತಿದ್ದರು. ಅದಕ್ಕೆ ವಿಶೇಷವಾದ ಸಂಪ್ರದಾಯಗಳು ಕಾಣಿಸಿಕೊಳ್ಳುತ್ತಿತ್ತು. ಗುತ್ತಿನ ಮನೆಯ ಕಂಬಳದಲ್ಲಿ ಬಂದಿರುವ ಜನರಿಗೆ ಊಟಮಾಡಲು ಕೊಪ್ಪರಿಗೆ ಅಕ್ಕಿ ಹಾಕುವ ಕ್ರಮವಿದೆ. ಅದಕ್ಕಾಗಿ ಭೂತದ ಸ್ಥಾನದ ಬಳಿಗೆ ಬಂದು ಅರಿಕೆ ಮಾಡಿಕೊಂಡು ದರ್ಶನದ ಮುಖಾಂತರ ಕೊಪ್ಪರಿಗೆಗೆ ನಾಲ್ಕು ಕಾಳು ಅಕ್ಕಿ ಹಾಕಿ ಅಪ್ಪಣೆ ಪಡೆದುಕೊಳ್ಳಬೇಕು. ಅಕ್ಕಿಯ ಮುಡಿಗೆ ಕಡ್ತಲೆಯನ್ನು ಮುಟ್ಟಿಸಿ ಕೊಡಿ ಎಲೆಯ ಗಂಧಪ್ರಸಾದವನ್ನು ಗುತ್ತಿನ ಯಜಮಾನನ ಕೈಗೆ ಕೊಟ್ಟು ಒಪ್ಪಿಗೆಯನ್ನು ನೀಡುವ ಪದ್ಧತಿ ಇತ್ತು. ಮನೆಯ ಮೂವರು ಮುತ್ತೈದೆಯರು ಯಜಮಾನರ ಕಾಲಿಗೆ ನಮಸ್ಕರಿಸಿ, ಬಾವಿಯ ಬಳಿಗೆ ಹರಿವಾಣದಲ್ಲಿ ಬೆಳ್ತಿಗೆ ಅಕ್ಕಿ, ವೀಳ್ಯ, ಅಡಿಕೆ, ಹಣತೆಯ ಜೊತೆಗೆ

ಬರುತ್ತಾರೆ. ಬಾವಿಗೆ ಒಂದು ಸುತ್ತು ಬಂದು ನಮಸ್ಕರಿಸಿ ವೀಳ್ಯ ಮತ್ತು ಅಡಿಕೆಯನ್ನು ಬಾವಿಗೆ ಸಮರ್ಪಿಸಿ ಮೂರು ಕೊಡ ನೀರನ್ನು ತೆಗೆದುಕೊಂಡು ಅಡುಗೆಮನೆಗೆ ಹೋಗುತ್ತಾರೆ.

ಪೂಕರೆ ಹಾಕುವ ಗದ್ದೆಯಲ್ಲಿ ಕಂಬಳದ ಕೋಣಗಳನ್ನು ಓಡಿಸುವ ಕ್ರಮ. ಅಲ್ಲಿ ಗದ್ದೆಯನ್ನು ಹದಮಾಡಿ ಕೋಣಗಳನ್ನು ಓಡಿಸಿ ಗದ್ದೆಯ ಮಧ್ಯದಲ್ಲಿ ಅಡಿಕೆ ಮರದ ಕಂಬನೆಟ್ಟು ನಾಗಧ್ವಜ ಹಾರಿಸಿ ಕ್ಷೀರಾಭಿಷೇಕ ನಡೆಸುವ ಸಂಪ್ರದಾಯಕ್ಕೆ ಪೂಕರೆ ಗದ್ದೆ ಎಂದು ಹೆಸರು. ಮೊದಲು ಗುತ್ತಿನ ಕಂಬಳದ ಕೋಣಗಳು ಅದರೊಟ್ಟಿಗೆ ಬೇರೆ ಐದು ಜೋಡಿ ಕೋಣಗಳನ್ನು ಕೊಂಬು ವಾದ್ಯಗಳೊಂದಿಗೆ ಪೂಕರೆಯ ಗದ್ದೆಗೆ ಇಳಿಸುತ್ತಾರೆ. ಗುತ್ತಿನ ಕೋಣಗಳ ಮೂಗಿನ ಹಗ್ಗವನ್ನು ಹಿಡಿದುಕೊಂಡು ಹೊಸಬಟ್ಟೆ, ಹೊಸಮುಟ್ಟಲೆ, ಹೊಸಬೈರಾಸ್ (ಶಾಲು) ಸೊಂಟಕ್ಕೆ ಕಟ್ಟಿ ಪರಿಶಿಷ್ಟ ಜನಾಂಗದವರು ಮೊದಲು ಇಳಿಯುತ್ತಾರೆ. ಅವರ ಹಿಂದೆ ಗುತ್ತಿನ ಮನೆಯ ಯುವಕರು, ಆಮೇಲೆ ಯಾವುದೇ ಧರ್ಮಭೇದವಿಲ್ಲದೆ ಕ್ರಿಶ್ಚಿಯನ್ನರು, ಮುಸ್ಲಿಮರು ತಮ್ಮ ತಮ್ಮ ಕೋಣಗಳೊಂದಿಗೆ ಗದ್ದೆಗೆ ಇಳಿಯುತ್ತಾರೆ. ಅಂದು ಕೇವಲ ಧಾರ್ಮಿಕ ಉದ್ದೇಶದಿಂದ ರೂಪುಗೊಂಡ ಕಂಬಳವು ಇಂದು ಒಂದು ಸ್ಪರ್ಧೆಯಾಗಿ ಮಾರ್ಪಟ್ಟಿದೆ. ಮೂವತ್ತು ನಲ್ವತ್ತು ಜೊತೆ ಕೋಣಗಳ ಮೂಲಕ ಕಂಬಳದ ಗದ್ದೆಯನ್ನು ಉಳುಮೆ ಮಾಡಿ ಮರುದಿನ ನಾಟಿ ಮಾಡುವ ಕ್ರಮ. ಅದು ಒಂದೇ ದಿನದಲ್ಲಿ ನಾಟಿಮಾಡಿಯಾಗಬೇಕು. ಒಂದು ದಿನದಲ್ಲಿ ಮುಗಿಯದಿದ್ದರೆ ಉಳಿದ ಭಾಗವನ್ನು ಹಾಗೆಯೇ (ಪಡಿಲು) ಬಿಡಬೇಕು.

ಪೂಕರೆಯನ್ನು ಗುತ್ತಿನ ಮೂಲದವರು ತಂದು ಗದ್ದೆಯಲ್ಲಿ ನೆಟ್ಟು ಪೊಲಿ ಕರೆಯುತ್ತಾರೆ. ಹಾಗೆಯೇ ಗದ್ದೆಯಲ್ಲಿ ನೀರು ಸರಿಯಾಗಿ ಹೋಗಲು ಕುರುಂಟು ಎಳೆಯುತ್ತಾರೆ. ಈ ರೀತಿಯ ಭಕ್ತಿಪೂರ್ಣ ಭಾವನೆಯಿಂದ ಗುತ್ತಿನ ಮನೆಗಳಲ್ಲಿ ಮಾಡುತ್ತಿದ್ದರು. ತುಳುನಾಡಿನಲ್ಲಿ ಕಂಬಳವನ್ನು ಪುರಾತನ ಕಾಲದಿಂದಲೂ ನಡೆಸಿಕೊಂಡು ಬರುತ್ತಿದ್ದರು. ಅದರಲ್ಲಿ ಕದ್ರಿ ಕಂಬಳಕ್ಕೆ ಸಾವಿರಾರು ವರ್ಷಕ್ಕೂ ಹಿಂದಿನ ಇತಿಹಾಸವಿದೆ. ಗುತ್ತಿನ ಪ್ರಭಾವ ಎಲ್ಲಾ ಕಡೆಗಳಲ್ಲಿ ಗೋಚರಿಸುತ್ತಿದೆ.

ತುಳುನಾಡಿನಲ್ಲಿ ಹೆಚ್ಚಿನ ಜಾತಿಗಳಲ್ಲಿ ಅವರು ನಂಬಿಕೊಂಡು ಬಂದಿರುವ ದೈವ, ಆ ದೈವಕ್ಕೆ ಒಂದು ಸ್ಥಾನ. ಅದರ ಬೇರೆ ಬೇರೆ ಪರ್ವ ಇತ್ಯಾದಿಗಳನ್ನು ಭಕ್ತಿಯಿಂದ ಮಾಡುತ್ತಾರೆ. ಆ ದೈವದ ಕೆಲಸವನ್ನು ಮಾಡಲು ಅವರಲ್ಲಿರುವ ಓರ್ವ ಸಜ್ಜನಿಕೆಯ ವ್ಯಕ್ತಿಯನ್ನು ನೇಮಕಮಾಡುತ್ತಾರೆ. ಅವರು ಎಲ್ಲಾ ರೀತಿಯಿಂದಲೂ ಪರಿಶುದ್ಧರಾಗಿರಬೇಕು. ಅಂತಹವರಿಗೆ ಗಡಿ ಹಿಡಿದವರು ಎಂದು ಕರೆಯುತ್ತಾರೆ. ಕಾದಂಬರಿಯಲ್ಲಿ ಮಲರಾಯನ ಗಡಿ ಹಿಡಿದಿರುವ ಮಂಜನಾಳ್ವನ ಬಗ್ಗೆ ತಿಳಿಸುತ್ತಾರೆ. ಇಂತಹ

ಗೌರವಯುತ ಅಧಿಕಾರವನ್ನು ಕೊಡುವ ಸಂದರ್ಭದಲ್ಲಿ ಜೋತಿಷ್ಯ ಕೇಳಿ ಅರ್ಹ ವ್ಯಕ್ತಿಯನ್ನು ಆಯ್ಕೆ ಮಾಡಿಕೊಳ್ಳುತ್ತಾರೆ. ಕಾರಣ, ಅವರಿಂದಾಗಿ ಕುಟುಂಬದ ಗೌರವ ಹೆಚ್ಚಬೇಕು. ಆದ್ದರಿಂದ ತುಂಬಾ ಎಚ್ಚರಿಕೆಯನ್ನು ವಹಿಸಿ ಈ ಅಧಿಕಾರವನ್ನು ನೀಡುತ್ತಾರೆ. ಈ ರೀತಿಯಲ್ಲಿ ಗಡಿ ಹಿಡಿದವರಿಗೆ ಸಮಾಜದ ಎಲ್ಲಾ ವರ್ಗದವರು ಗೌರವವನ್ನು ಕೊಡುತ್ತಾರೆ. ಆದ್ದರಿಂದ ಗುತ್ತಿನ ಮನೆದೈವದ ಗಡಿ ಹಿಡಿದವರು ಎಂದರೆ ಮತ್ತೂ ಗೌರವ ಹೆಚ್ಚಾಗುತ್ತದೆ. ಗಡಿ ಹಿಡಿಯುವ ಮೊದಲು ಆ ವ್ಯಕ್ತಿಯನ್ನು ತಂತ್ರಿಗಳು ಮಂಗಳ ಸ್ನಾನದ ಮೂಲಕ ಶುದ್ಧಗೊಳಿಸುತ್ತಾರೆ. ಇದಕ್ಕಾಗಿ ಪವಿತ್ರ ಕ್ಷೇತ್ರಗಳಿಂದ ನೀರನ್ನು ತರುವ ಸಂಪ್ರದಾಯವಿದೆ. ಕಾದಂಬರಿಯಲ್ಲಿ ಮಂಜನಾಳ್ವರಿಗೆ ಮಂಗಳ ಸ್ನಾನ ಮಾಡಿಸಲು ಕಣ್ವತೀರ್ಥದಿಂದ ಜಲವನ್ನು ತರಿಸಿ, ಗುರುಹಿರಿಯರ, ಬಂಧುಗಳ ಸಮ್ಮುಖದಲ್ಲಿ ಮಂಗಳಸ್ನಾನ ಮಾಡಿಸುತ್ತಾರೆ. ಒದ್ದೆಬಟ್ಟೆಯಲ್ಲಿ ಅಂಗಳದ ನೇಮದ ಚಪ್ಪರಕ್ಕೆ ಬಂದು ಹಿರಿಯರ ಕಾಲಿಗೆ ನಮಸ್ಕರಿಸಿ, ಕೊನೆಯ ಬಾರಿಯಾಗಿ ತಾಯಿಯ ಕಾಲಿಗೆ ನಮಸ್ಕರಿಸಿ ಮಾವಂದಿರ ಅಪ್ಪಣೆ ಪಡೆದುಕೊಳ್ಳುತ್ತಾರೆ. ಗಡಿ ಹಿಡಿದ ಮೇಲೆ, ತಾಯಿ, ಬಂಧು, ಬಳಗ ಎನ್ನುವ ಯಾವುದೇ ಸಂಬಂಧವಿಲ್ಲ. ಇನ್ನು ಮುಂದೆ ಯಾವುದೇ ಸೂತಕವಾಗಲೀ ಸಂಬಂಧವಾಗಲೀ ಇರುವುದಿಲ್ಲ. ತಾಯಿ ಸತ್ತರೆ ಅವಳ ಹೆಣವನ್ನು ಕೂಡ ಮುಟ್ಟಬಾರದು. ಉತ್ತರಕ್ರಿಯೆಯ ಊಟವನ್ನು ಮಾಡಬಾರದು. ಈ ಕಟ್ಟುಪಾಡುಗಳು ಅವರನ್ನು ಕೌಟುಂಬಿಕ ಸಂಬಂಧದಿಂದ ಹೊರಗಿಡುತ್ತವೆ. ಮನೆಯ ಮಲರಾಯ ದೈವವು ಹಿರಿಯರ, ಊರವರ, ಚಾಕರಿಯವರ, ಬಂಧುಗಳ ಅಪ್ಪಣೆಯನ್ನು ಪಡೆದು ಗಂಧ ಪ್ರಸಾದದ ವೀಳ್ಯವನ್ನು ಮಂಜಣನ ಕೈಗೆ ನೀಡಿ, ಗುಂಡಕ್ಕೆ ಮೂರು ಸುತ್ತು ಬಂದು ಕೈಯಲ್ಲಿರುವ ಗಂಧಪ್ರಸಾದ ವೀಳ್ಯಕ್ಕೆ ಕಡ್ತಲೆ ಮುಟ್ಟಿಸಿತು. ಮಿತ್ತಬೈಲಿನಲ್ಲಿ ಯಾರೇ ಗಡಿ ಹಿಡಿಯಲಿ ಅವರನ್ನು 'ಮಂಜನಾಳ್ವ' ಎಂದು ಬಿರುದಿಟ್ಟು ಕರೆಯುವ ಪದ್ಧತಿಯನ್ನು ಜಾರಿಮಾಡಿತು. ದೈವದ ಗಡಿ ಹಿಡಿದವರು ಬೆಳಗ್ಗೆ ಸ್ನಾನಮಾಡದೆ ಅನ್ನಾಹಾರ ಸೇವಿಸಬಾರದು. ಮುಟ್ಟಾದ ಹೆಂಗಸರು, ಕೆಳಜಾತಿಯವರು ಅವರ ಬಳಿ ಸುಳಿಯಬಾರದು. ಅಂಗಿ ಹಾಕಬಾರದು, ಶಾಲುಹೊದ್ದುಕೊಂಡು, ಮುಂಡಾಸು ಕಟ್ಟಿಕೊಂಡು, ಕೈಗೊಂದು ಅಧಿಕಾರದ ಕಂಕಣ ಹಾಕಿಕೊಂಡು ಭೂತದ ಮುಂದೆ ನಿಲ್ಲಬೇಕು. ಕುಟುಂಬದವರಿಗೆ ಗಂಧಪ್ರಸಾದ ಅವರೇ ತೆಗೆದು ಕೊಡಬೇಕು. ತಂತ್ರಿಯವರು ಇಲ್ಲದಿದ್ದಾಗ ದೈವಕ್ಕೆ ಹೂಹಾಕಿ ಧೂಪ ಕೊಡುವ ಕೆಲಸವು ಅವರದೇ. ಹಿರಿಯರು, ಬ್ರಾಹ್ಮಣರು, ತಾಯಿ, ತಂಗಿ, ಮಕ್ಕಳೂ ಕೂಡ ಗಡಿಹಿಡಿದವರು ಅಥವಾ ಮಂಜನಾಳ್ವ ಎಂದೇ ಕರೆಯಬೇಕು. ದೈವದ ಗಡಿಹಿಡಿಯುವುದು ಕೂಡಾ ಗೌರವದ ಪ್ರಶ್ನೆ. ಗಡಿ ಹಿಡಿಯುವುದಕ್ಕಾಗಿಯೇ ಹೊಡೆದಾಟ, ಸಾವು, ನೋವು, ಸಂಭವಿಸಿದ್ದಿದೆ. ಈ ಕಾದಂಬರಿಯ ಮುಖ್ಯ ಭಾಗವು, ಅದೇ ಆಗಿದೆ.

ಅಧಿಕಾರದ ಸಂಘರ್ಷ ಕೌಟುಂಬಿಕ ನೆಲೆಯಿಂದಲೇ ಆರಂಭಗೊಳ್ಳುತ್ತದೆ. ಒಮ್ಮತವಿರುವಲ್ಲಿ ಅದು ಸುಖಾಂತ್ಯವಾಗುತ್ತದೆ. ವಿರೋಧಗಳ ಕಡೆ ದುರಂತ ಸಂಭವಿಸುತ್ತದೆ ಎನ್ನುವುದು ಈ ಕಾದಂಬರಿಯಲ್ಲಿ ಮನದಟ್ಟಾಗುತ್ತದೆ. ಊರಿನ ಭೂತಸ್ಥಾನ, ದೇವಸ್ಥಾನದ ಅಧಿಕಾರವು ಗುತ್ತಿನವರ ಕೈಯಲ್ಲಿತ್ತು. ಅದರ ವಾರ್ಷಿಕ ಪರ್ವಗಳ ಸಂದರ್ಭದಲ್ಲಿ ಎಲ್ಲಾ ಜಾತಿಯವರ ಪಾಲ್ಗೊಳ್ಳುವಿಕೆ ಮುಖ್ಯವಾದರೂ ಅದರಲ್ಲಿ ನಾಯಕತ್ವವನ್ನು ವಹಿಸಿಕೊಳ್ಳುವುದು ಗುತ್ತಿನವರು. ಊರಿನ ದೇವಸ್ಥಾನ, ಭೂತಸ್ಥಾನಗಳ ವಿನಿಯೋಗದ ಆಸ್ತಿಯೂ ಗುತ್ತಿನ ಸ್ವಾಧೀನ ಇರುತ್ತಿತ್ತು. ಭೂತದ ಚಾಕರಿಯವರಿಗೆ ಕೆಲಸ ಕಾರ್ಯಗಳಿಗೆ ಬೇಕಾದ ಆಸ್ತಿಯನ್ನು ಉಂಬಳಿ ಬಿಟ್ಟು ಅಧಿಕಾರ ನಡೆಸುತ್ತಿದ್ದರು.

ಗತಿಸಿದ ಹಿರಿಯರಿಗೆ ಸಮಾಧಿಯನ್ನು ಮಾಡುವ ಸಂಪ್ರದಾಯ ಹೆಚ್ಚಿನ ಕಡೆಗಳಲ್ಲಿ ಕಂಡುಬಂದರೂ ಗುತ್ತಿನವರ ಸಮಾಧಿಗಳು ಸ್ವಲ್ಪ ಭಿನ್ನವಾಗಿದೆ ಅವರು ಸಮಾಧಿ ಕಟ್ಟುವಾಗ ನಾಲ್ಕು ಜನ ಕುಳಿತು ವಿಶ್ರಾಂತಿ ಪಡೆಯುವಂತಹ ಮಂಟಪಗಳನ್ನು ಕಟ್ಟಿಸುತ್ತಿದ್ದರು. ದಾರಿಹೋಕರು ವಿಶ್ರಾಂತಿ ಪಡೆದು ಬಾಯಾರಿಕೆಗೆಂದು ಮಣ್ಣಿನ ಪಾತ್ರೆಯಲ್ಲಿರಿಸಲಾಗುತ್ತಿದ್ದ ನೀರು ಕುಡಿದುಕೊಂಡು ತೃಪ್ತಿ ಹೊಂದಿದರೆ, ಗುತ್ತಿಗೆ ಬಹುದೊಡ್ಡ ಸಂತೋಷ. ಆ ಸಮಾಧಿಗೆ ಬೆಳಗ್ಗೆ ಎದ್ದು ಒಂದು ತಂಬಿಗೆ ನೀರನ್ನಿಟ್ಟು ನಮಸ್ಕರಿಸಿಯೇ ಅವರ ದೈನಂದಿನ ಕೆಲಸಗಳು ನಡೆಯುವುದು. ಗತಿಸಿದ ಹಿರಿಯರ ಕೃಪೆ ತಮ್ಮ ಮೇಲಿರಬೇಕು, ಆದರಿಂದಾಗಿ ಗುತ್ತಿನ ಸ್ಥಾನಮಾನ ಮೇಲೇರಬೇಕು ಎನ್ನುವುದು ಮುಖ್ಯ ಉದ್ದೇಶ. ಇಂದು ಸಮಾಧಿಗಳ ನಿರ್ಮಾಣ ಮಾಡಿಕೊಂಡರೂ ಅದು ಮೊದಲಿನಷ್ಟು ವಿಸ್ತಾರವಾಗಿಲ್ಲ. ಇದು ಧಾರ್ಮಿಕವಾಗಿ ಗುತ್ತಿನ ಸಂಸ್ಕೃತಿಯ ಮೇಲೆ ಬಹಳ ಪರಿಣಾಮವನ್ನು ಬೀರುತ್ತದೆ. ಕುಲದೈವದ ಆರಾಧನಾ ಪದ್ಧತಿಯ ಮುಖಾಂತರ ಇಡೀ ಕುಟುಂಬದ ನಿಯಂತ್ರಣವು ಅಲ್ಲಿ ನಡೆಯುತ್ತದೆ. ದೈವಕ್ಕಿಂತ ಮಿಗಿಲಾದ ಶಕ್ತಿ ಇಲ್ಲ ಎನ್ನುವ ಭಯ ಇರುವ ಕಾರಣದಿಂದಾಗಿ, ಗುತ್ತಿನ ಸಮಗ್ರ ಹಿಡಿತವನ್ನು ಇಟ್ಟುಕೊಳ್ಳಲು ಸಾಧ್ಯವಾಯಿತು.

### ೪.೩: ಗುತ್ತು ಮತ್ತು ರಾಜಕೀಯ

ರಾಜಕೀಯ ಚಿತ್ರಣವು ಕಾದಂಬರಿಯ ಬಹುಮುಖ್ಯವಾದ ಭಾಗ. ಗುತ್ತು ರಾಜಕೀಯ ನಡೆಸುವ ಒಂದು ಸ್ಥಳ. ಅಲ್ಲಿ ನ್ಯಾಯ ಅನ್ಯಾಯವನ್ನು ಪ್ರಶ್ನಿಸುವ ಅಧಿಕಾರವಿದೆ. ಈ ಅಧಿಕಾರವನ್ನು ಅವರಾಗಿಯೇ ಸೃಷ್ಟಿಮಾಡಿಕೊಂಡದ್ದಲ್ಲ. ಅದು ರಾಜನಿಂದ ಅಥವಾ ಅಧಿಕಾರ ನಡೆಸುವ ವರ್ಗದಿಂದ ಬಂದಿರುವಂತಹದು. ಹಿಂದಿನ ಅರಸರು ಗ್ರಾಮ ಮಟ್ಟದಲ್ಲಿ ನ್ಯಾಯ ತೀರ್ಮಾನ ಹಾಗೂ ಆಡಳಿತ

ವ್ಯವಸ್ಥೆಯನ್ನು ನೋಡಿಕೊಳ್ಳಲು ಹುಡುಕಿಕೊಂಡ ಸುಲಭ ವ್ಯವಸ್ಥೆಯನ್ನು ಕಂಡುಹುಡುಕಿ ಗುತ್ತಿಗೆ ಆ ಅಧಿಕಾರವನ್ನು ಕೊಟ್ಟರು. ಇದರಿಂದಾಗಿ ಗ್ರಾಮಮಟ್ಟದ ತೀರ್ಮಾನಗಳು ಗುತ್ತಿನ ಚಾವಡಿಯಲ್ಲಿ ನಡೆಯಲಾರಂಭಿಸಿತು. ಆರಂಭದಲ್ಲಿಯೇ ಗುತ್ತಿನ ಬಗ್ಗೆ ಗೌರವ, ಭಯವನ್ನು ಹೊಂದಿರುವ ಜನ, ಚಾವಡಿಯಲ್ಲಿ ದೈವದ ಭಂಡಾರದ ಎದುರು ನಿಂತು ಸುಳ್ಳು ಹೇಳಲು ಸಿದ್ಧರಿಲ್ಲ. ತಾವು ಮಾಡಿರುವ ತಪ್ಪನ್ನು ಒಪ್ಪಿಕೊಂಡು ಬಿಡುತ್ತಾರೆ, ಶಿಕ್ಷೆಯನ್ನು ಅನುಭವಿಸುತ್ತಾರೆ. ಇದು ಒಟ್ಟಾಗಿ ಗುತ್ತಿನ ಸಾಮರ್ಥ್ಯ, ಸಂಸ್ಕೃತಿಯ ಮೇಲೆ ಪರಿಣಾಮ ಬೀರುತ್ತದೆ. ಪ್ರಾಥಮಿಕ ಹಂತದ ಸಮಸ್ಯೆಗಳು ರಾಜರ ಬಳಿ ಹೋಗದೆ ಚಾವಡಿಯಲ್ಲಿಯೇ ತೀರ್ಮಾನವಾಗುವುದರಿಂದ ರಾಜನಿಗೂ ಗುತ್ತಿನ ಜೊತೆಗೆ ಹೆಚ್ಚು ನಿಕಟ ಸಂಪರ್ಕವಿರುತ್ತದೆ, ಜೊತೆಗೆ ನಂಬಿಕೆಗೆ ಅರ್ಹರಾಗಿ ಬಿಡುತ್ತಾರೆ. ಆ ಕಾಲದಲ್ಲಿ ರಾಜನ ಸೈನ್ಯದ ನಾಯಕನಾಗಿ ಸಿಗುವ ಅಧಿಕಾರವೂ ಕೂಡ ನಂಬಿಕಸ್ಥರಿಗೆ ಮಾತ್ರ. ಅದ್ದರಿಂದ ಆ ಕಾಲದಲ್ಲಿ ದಂಡಿಗೆ ಕರೆಸಿದವರನ್ನ ಮಾತ್ರ ಸೇರಿಸಿಕೊಳ್ಳುತ್ತಿದ್ದರು. ಯಾರೂ ತಾವಾಗಿ ಹೋಗಿ ದಂಡಿಗೆ ಸೇರುವ ಕ್ರಮ ಇಲ್ಲ. ಅರಮನೆಯ ಕರೆ ಬಂದರೆ ಮಾತ್ರ ಸೇರಿಕೊಳ್ಳಬೇಕು. ಅರಸನ ಮೇಲೆ, ರಾಜ್ಯದ ಮೇಲೆ ವಿಶ್ವಾಸ ಇಲ್ಲದವರೂ ಸೇರಿಯಾರು ಹಾಗೆಯೇ ತಮ್ಮ ವೈರಿಗಳ ಜೊತೆ ಸೇರಿ ತೊಂದರೆಯನ್ನು ಕೊಡಬಹುದು ಎನ್ನುವ ಉದ್ದೇಶದಿಂದಾಗಿ ಹಳ್ಳಿಯಲ್ಲಿದ್ದ ಗುತ್ತಿನ ಯಜಮಾನರೇ ಸೇನೆಗೆ ಜನ ಕಳುಹಿಸುವುದು ಕ್ರಮ. ಅದರಲ್ಲಿ ಗುತ್ತಿನವರೇ ದಂಡಿನ ನಾಯಕರಾಗುತ್ತಿದ್ದರು. ಇದು ಗುತ್ತಿನ ಬಗ್ಗೆ ರಾಜನಿಗಿದ್ದ ವಿಶ್ವಾಸದ ಸಂಕೇತ. ಗುತ್ತಿನವರು ಕೂಡಾ ಈ ವಿಶ್ವಾಸವನ್ನು ಉಳಿಸಿಕೊಳ್ಳುತ್ತಿದ್ದರು. ತಮ್ಮ ಪ್ರಾಣಹೋದರೂ ಚಿಂತೆಯಿಲ್ಲ ಎನ್ನುವ ರೀತಿಯಲ್ಲಿ ಅರಸನಿಗೆ ನಿಷ್ಠೆಯಿಂದ ಕೂಡಿದ್ದರು. ದಂಡಿನ ದಳವಾಯಿಯಾಗಿ ಮೂರು ತಿಂಗಳ ತರಬೇತಿ ಪಡೆದ ನಂತರ ಮನೆಗೆ ಹೋಗಲು ಬಿಡುತ್ತಿದ್ದರು. ಹೀಗೆ ಬಂದ ಆಳುಗಳು ಅವರವರ ಕುಲಕಸುಬು ಮಾಡಿಕೊಂಡು ಅರಸರು ಬಿಟ್ಟ ಉಂಬಳಿ, ಸಂಬಳವನ್ನು ಅನುಭವಿಸುತ್ತಿದ್ದರು. ಆಯಾ ಊರಿನ ಗುತ್ತಿನ ಯಜಮಾನನಿಗೆ ಅವನ ಊರಿನ ಸೈನಿಕರ ಜವಾಬ್ದಾರಿ ಕೊಡುತ್ತಿದ್ದರು. ಗುತ್ತಿನವರು ಹಾಗೆ ತರಬೇತಿ ಮುಗಿಸಿ ಬಂದ ದಂಡಾಳುಗಳನ್ನು ತಮ್ಮ ಒಕ್ಕಲಿನಲ್ಲಿ ಕುಳ್ಳಿರಿಸಿ ಅವರಿಗೆ ಕೆಲಸ, ಅಲ್ಲದಿದ್ದರೆ ದುಡಿಯುವ ಭೂಮಿಕೊಟ್ಟು ಸಾಕುತ್ತಿದ್ದರು. ಅರಸನಿಗೆ ಅಗತ್ಯವಾದಾಗ ದಂಡನ್ನು ಕರೆಸಿಕೊಳ್ಳುತ್ತಿದ್ದರು. ಇಂತಹ ಜವಾಬ್ದಾರಿಯುತವಾದ ಕೆಲಸವನ್ನು ಗುತ್ತಿನವರಿಗೆ ಕೊಡುವುದರ ಮೂಲಕ ಗುತ್ತಿನ ಹೆಸರು ಅರಸರ ಆಸ್ಥಾನದಲ್ಲಿಯೂ ಕೇಳಿಬರುತ್ತಿತ್ತು. ಕಾದಂಬರಿಯಲ್ಲಿ ಮಂಜನಾಳ್ವ ಮಾಯಿಪ್ಪಾಡಿಯ ರಾಮಂತರಸರ ಸೇನೆಯನ್ನು ಸೇರಿ ಕತ್ತಿವರಸೆ, ಸಿಡಿಮದ್ದು ಸಿಡಿಸುವುದು, ಈಟಿಯುದ್ಧ, ಕುದುರೆ ಸವಾರಿ, ಕತ್ತಿಯುದ್ಧ, ತುಪಾಕಿ, ಭರ್ಜಿಗಳ ಯುದ್ಧವನ್ನು ಅಭ್ಯಾಸ ಮಾಡುತ್ತಿರುವಾಗ ಅರಸರ

ಗಮನಕ್ಕೆ ಬಂದು ಐನೂರಾಳುಗಳ ನಾಯಕನಾಗಿ ನೇಮಕಗೊಂಡು ದಂಡನಾಯಕನಾಗುತ್ತಾನೆ. ಅದೇ ರೀತಿ ತರಬೇತಿಯಲ್ಲಿ ಭಾಗವಹಿಸಿದ್ದ ಕಾಂತಣ್ಣನಿಗೆ ಕುದುರೆಯ ಮೇಲಿರುವ ಪ್ರೀತಿಯಿಂದ ಕುದುರೆಯ ತುಕಡಿಯ ನಾಯಕನನ್ನಾಗಿ ಮಾಡುತ್ತಾರೆ. ದಂಡಿನ ಗೌರವ ಗುತ್ತಿಗೆ ಬರುವುದು ತುಂಬಾ ಸಂತೋಷದ ವಿಷಯ. ದಂಡಿನ ಶಿಸ್ತು, ಕಲಿತಿರುವ ವಿದ್ಯೆ ಎಲ್ಲವೂ ಒಬ್ಬ ಪ್ರಬುದ್ಧ ಯಜಮಾನನನ್ನಾಗಿ ರೂಪಿಸುತ್ತದೆ. ತನಗೆ ವಹಿಸಿರುವ ಕೆಲಸವನ್ನು ನಿಷ್ಠೆಯಿಂದ ಮಾಡುವ ಸ್ವಭಾವ ಮಂಜನಾಳ್ವನದು. ಆ ಸಂದರ್ಭದಲ್ಲಿ ಶ್ರೀಮಂತರ ಮನೆಯನ್ನು ಲೂಟಿ ಮಾಡುವುದು ಕೆಲವು ಜನರ ಅಭ್ಯಾಸ. ಹಾಗೆಯೇ ಮಿತ್ತಬೈಲ್, ವರ್ಕಾಡಿ, ಕೋಳ್ಯೂರನ್ನು ಕೊಳ್ಳೆ ಹೊಡೆಯಲು ಬಂದ ಬೀರಣ್ಣಾಳ್ವನ ಜೊತೆ ಹೋರಾಡಿ ಆ ಪೋಲಿ ಹುಡುಗರ ಗುಂಪು ಸಿಕ್ಕಸಿಕ್ಕಲ್ಲಿ ಓಡತೊಡಗಿತು. ಸೆರೆಸಿಕ್ಕಿರುವ ಬೀರಣ್ಣಾಳ್ವನ ಜನರಿಗೆ ಮಂಜನಾಳ್ವ ಕ್ಷಮಿಸುತ್ತಾನೆ. ಆಗ ಅರಸರು "ಈ ವಿದ್ರೋಹಿಗಳಿಗೆ ದಯೆ–ದಾಕ್ಷಿಣ್ಯ ತೋರಿಸುವಂತೆ ಹೇಳಬೇಡ. ಮರೆಯಬೇಡ ಶಿಕ್ಷೆಯೂ ದಯೆ, ಧರ್ಮದಷ್ಟೇ ದೊಡ್ಡ ರಾಜ್ಯಶಾಸನದ ಒಂದು ಭಾಗ. ಅದು ಆಡಳಿತಕ್ಕೆ ಅಗತ್ಯ ಎಂಬುದನ್ನು ಮರೆಯಬೇಡ. ರಾಜಾಡಳಿತ ಬಿಗಿಯಾಗಬೇಕಾದರೆ ಶಿಕ್ಷೆಕೊಟ್ಟು, ವಿದ್ರೋಹ ಎಸೆಗಿದರೆ ಏನಾಗುತ್ತದೆ ಎಂಬುದನ್ನು ತೋರಿಸಿಕೊಡಬೇಕು"[1] ಎಂದು ಹೇಳಿದ ಮಾತುಗಳು ಆಡಳಿತಗಾರನ ಸ್ವಭಾವವನ್ನು ತಿಳಿಸುತ್ತದೆ. ಮುಂದಕ್ಕೆ ಮಂಜನಾಳ್ವನು ಕೂಡಾ ಅದೇ ರೀತಿಯ ನಿಯಮಗಳನ್ನು ಪಾಲಿಸುತ್ತಾನೆ. ಪರಿಣಾಮವಾಗಿ ಮಾಯಿಲ ಬೆಳ್ಚಡನ ತಲೆಯನ್ನು ಕತ್ತರಿಸಿಬಿಡುತ್ತಾನೆ. ದುರ್ಗಮ್ಮನ ಸಿರಿಮುಡಿಗೆ ಕೈಹಾಕಿ ಎಳೆಯುವ ತನ್ನ ಜಾತಿಯವನೇ ಆದ ಬೀರಣ್ಣಾಳ್ವನ ಎರಡೂ ಕೈಗಳನ್ನು ಕತ್ತರಿಸುತ್ತಾನೆ. ಬೀರಣ್ಣಾಳ್ವ ತನ್ನ ಕುಲದವನಾದರೂ ಮಂಜನಾಳ್ವ ಅದನ್ನು ಗಮನಿಸದೆ, ತಾನು ಮಾಡುವ ಜವಾಬ್ದಾರಿಯನ್ನು ಅರಿತು ದೇಶಪ್ರೇಮದ ಹೆಸರನ್ನು ಹೇಳಿ ಮೋಸಮಾಡುವ ಬೀರಣ್ಣ ಬಂಟನಿಗೆ ಸರಿಯಾದ ಶಿಕ್ಷೆಯನ್ನು ಕೊಡುತ್ತಾನೆ. ತಪ್ಪು ಯಾರೇ ಮಾಡಿರಲಿ, ಅವನು ತಪ್ಪಿತಸ್ಥನೇ. ಇದು ಮಂಜನಾಳ್ವನ ಪಾತ್ರದ ಮುಖಾಂತರ ವ್ಯಕ್ತವಾಗುತ್ತದೆ ಹಾಗೂ ಗುತ್ತು ಸಂಸ್ಕೃತಿಯ ಮೇಲೂ ಈ ಮಾತು ಅನ್ವಯಿಸುತ್ತದೆ. ಅಧಿಕಾರ ನಡೆಸುವವರು ಪಕ್ಷಪಾತವನ್ನು ಮಾಡಿದರೆ ಒಟ್ಟು ವ್ಯವಸ್ಥೆಯ ಮೇಲೆ ಪರಿಣಾಮವನ್ನು ಬೀರುತ್ತದೆ. ಅದ್ದರಿಂದ ಜಾತಿ ಮತವನ್ನು ಮರೆತು ಕಾರ್ಯನಿರ್ವಹಿಸಬೇಕು ಎನ್ನುವುದು ಮಂಜನಾಳ್ವನ ಪಾತ್ರದ ಮೂಲಕ ವ್ಯಕ್ತಗೊಳ್ಳುತ್ತದೆ.

ಕಾದಂಬರಿಯ ಇನ್ನೊಂದು ಮುಖ್ಯ ಭಾಗ ಅಧಿಕಾರಕ್ಕಾಗಿ ನಡೆಯುವ ಸಂಘರ್ಷ. ಇದು ಕೂಡಾ ಗುತ್ತು ಸಂಸ್ಕೃತಿಯ ಭಾಗ. 'ಅಧಿಕಾರ' ಗುತ್ತಿನ ಗೌರವದ ಪ್ರಶ್ನೆ. ಅದನ್ನು ಪಡೆಯುವುದಕ್ಕೋಸ್ಕರ

೧ ಮಹಮ್ಮದ್ ಕುಳಾಯಿ – ಮಿತ್ತಬೈಲ್ ಯಮುನಕ್ಕ – ಪು.ಸಂ. ೧೧೨

ಹೆಣಗಳು ಕೂಡಾ ಬೀಳುತ್ತವೆ ಎಂಬ ಅಂಶ ಕಾದಂಬರಿಯಲ್ಲಿ ವ್ಯಕ್ತಗೊಳ್ಳುತ್ತದೆ. ಕಾದಂಬರಿಯ ಆರಂಭದಿಂದ ಕೊನೆಯವರೆಗೆ ಈ ಅಂಶಗಳು ವ್ಯಕ್ತಗೊಳ್ಳುತ್ತಾ ಬರುತ್ತವೆ. ಆರು ತಲೆಮಾರುಗಳಲ್ಲಿ ಹರಡಿಕೊಂಡಿರುವ ಈ ಕಾದಂಬರಿಯು ಮಿತ್ತಬೈಲ್ ಗುತ್ತಿನ ಯಜಮಾನಿಕೆಗಾಗಿ ನಡೆಯುವ ಸಂಘರ್ಷ ಮುಖ್ಯವಾದುದಾಗಿದೆ. ಗುತ್ತಿನ ಯಜಮಾನನಾಗುವ ಮಾಂಕರಾಲ ಮಿತ್ತಬೈಲ್ ಗುತ್ತಿನ ಶ್ರೀಮಂತಿಕೆಯನ್ನು ನಿರ್ನಾಮ ಮಾಡಲು ಹೊರಟಿರುವ ವ್ಯಕ್ತಿ. ಅಂದು ಹಚ್ಚ ಹಸುರಿನಿಂದ ಕೂಡಿದ್ದ ಭೂಮಿ ಇಂದು ಪಾಳು ಬಿದ್ದಿದೆ. ಮನೆಯ ಸುತ್ತ ಭತ್ತದ ರಾಶಿ ಇಲ್ಲ. ಉಳುಮೆಯ, ಕಂಬಳದ ಕೋಣಗಳಿಲ್ಲ, ಗುತ್ತಿನ ಮನೆ, ಹುಲಿ ತಿಂದು ಉಳಿದ ಜಾನುವಾರಿನ ದೇಹವನ್ನು ನರಿ, ತೋಳಗಳು ಹೇಗೆ ಎಳೆದಾಡುತ್ತಿರುತ್ತವೋ ಹಾಗೆ ಆಗಿತ್ತು. ಅಲ್ಲಲ್ಲಿ ಗೋಡೆಗಳು ಜರಿದು ಪಾಳು ಬಿದ್ದಂತೆ ಕಾಣುವ ಗುತ್ತಿನ ಮನೆಗೆ ಹುಲ್ಲು ಹೊದಿಸದೆ ಆದೆಷ್ಟೋ ಕಾಲವಾಗಿತ್ತು. ಮನೆಯ ಯುವಕರು ರೌಡಿಗಳಂತೆ ತಿರುಗುವುದು, ಕದ್ದು ಮಾರುವುದು ವೃತ್ತಿಯಾಗಿತ್ತು. ಮೈ ನೆರೆದು ಹತ್ತು-ಹದಿನೈದು ವರ್ಷವಾದರೂ ಮದುವೆಯಾಗದೆ ಉಳಿದುಕೊಂಡಿರುವ ಹೆಣ್ಣುಮಕ್ಕಳಿಗೆ ಜಗಳವಾಡುವುದೇ ಕೆಲಸ. ಮನೆಯಲ್ಲಿ ಸುಖವಾಗಿ ಮೆರೆಯುತ್ತಿದ್ದದ್ದು ಗುತ್ತಿನ ಯಜಮಾನರ ಹೆಂಡತಿ ಮಕ್ಕಳು ಮಾತ್ರ. ಮನೆಯ ಸೊಸೆಯಂದಿರಿಗೆ ಉಡಲು ಸರಿಯಾಗಿ ಬಟ್ಟೆಗಳೂ ಕೂಡ ಇರಲಿಲ್ಲ. ಇಂತಹ ಅವನತಿಯ ಸ್ಥಿತಿಯಲ್ಲಿ ಮಿತ್ತಬೈಲಿತ್ತು. ಇದಕ್ಕೆ ಕಾರಣ ಗುತ್ತಿನ ಭೂಮಿಯನ್ನು ಮಾಂಕರಾಲ ಮಾರಾಟ ಮಾಡಿರುವುದು, ಅಡಮಾನ ಇಟ್ಟಿರುವುದು ಹಾಗೂ ಅಕ್ರಮ ಸಂಬಂಧಗಳು. ಆಚಕ್ಕನ ಜೊತೆಗಿನ ಸಂಬಂಧದ ಫಲವಾಗಿ ಬಾರೆಬೈಲಿನಲ್ಲಿ ತ್ಯಾಂಪಣ್ಣ ಸಣ್ಣ ಮಟ್ಟಿನ ನಾಯಕನಾಗಿ ರೂಪುಗೊಂಡಿದ್ದಾನೆ. ಮೂರ್ತೆಯ ಕೆಲಸ ಮಾಡುವ ಒಕ್ಕಲಿನ ಪೂವಮ್ಮನ ಜೊತೆಗಿನ ಸಂಬಂಧದಿಂದಾಗಿ ಮಿತ್ತಬೈಲಿನ ಚಿನ್ನದ ರಾಶಿಯಿಂದ ಚಕ್ರಸರ, ಐನೂರು ಬೆಳ್ಳಿಯ ರೂಪಾಯಿಗಳು, ನಾಲ್ಕು ಚಿನ್ನದ ಪವನುಗಳು ಕಾಣೆಯಾಗಿತ್ತು. ಮಿತ್ತಬೈಲಿನ ಸಂಪತ್ತು ಕಂಡವರು ತಿಂದ ಹಾಗೆ ಎಲ್ಲೆಲ್ಲೋ ಹೋಗಿಬಿಡುತ್ತದೆ. ಇಂತಹ ಯಜಮಾನನಿಂದಾಗಿ ಗುತ್ತಿನ ಮಾನ ಮರ್ಯಾದೆ ಬೀದಿಪಾಲಾಗುತ್ತದೆ ಎಂದು ಮನೆಯ ಯುವಕರು, ಯಮುನಕ್ಕ, ಸುಬ್ಬಯಣ್ಣ ತಿಳಿದುಕೊಂಡರು. ಇದೆಲ್ಲದರ ಪರಿಣಾಮವಾಗಿ ಮಿತ್ತಬೈಲಿನ ಬೇಸತ್ತ ಯುವಕರು ಮಾಂಕರಾಲನನ್ನು ಕತ್ತು ಹಿಸುಕಿ ಕೊಂದುಬಿಡುತ್ತಾರೆ. ತಮ್ಮ ಸಂಸ್ಕೃತಿ ನೀತಿಕ್ರಮಗಳಿಗೆ ವಿರೋಧವುಂಟಾದರೆ ಕೊಲೆ ಮಾಡಲು ಹೇಸುವುದಿಲ್ಲ. ಅಧಿಕಾರ ದುರುಪಯೋಗಪಡಿಸುವುದನ್ನು ಗುತ್ತು ಸಂಸ್ಕೃತಿ ವಿರೋಧಿಸುತ್ತದೆ.

ಬೀರಣ್ಣ ಬಂಟನ ವಂಶದವನಾದ ತ್ಯಾಂಪಣ್ಣನ ವಶದಲ್ಲಿರುವ ಬಾರೆಬೈಲಿನ ಮನೆ ಆಸ್ತಿಯನ್ನು ಪಡೆದುಕೊಳ್ಳುವ ಉದ್ದೇಶಕ್ಕೋಸ್ಕರ ನಡೆದ ಗಲಭೆ ಇಡೀ ಗುತ್ತಿನ ವ್ಯಾಮೋಹವನ್ನು ಪ್ರತಿನಿಧಿಸುತ್ತದೆ.

ಮಿತ್ತಬೈಲಿನ ಯಜಮಾನನ ಆಯ್ಕೆಯ ಸಂದರ್ಭದಲ್ಲಿಯೇ ವಿರೋಧವನ್ನು ಮಾತನಾಡುತ್ತಿದ್ದ ತ್ಯಾಂಪಣ್ಣ, ಗೇಣಿಕೊಡದೆ ಇರುವಾಗ ಮತ್ತಷ್ಟು ಹಗೆತನ ಜಾಸ್ತಿಯಾಯಿತು. ಕೋರ್ಟಿನಲ್ಲಿ ಜಯ ಲಭಿಸದಿರುವಾಗ ಬಾರೆಬೈಲನ್ನು ಹೇಗಾದರೂ ಮಾಡಿ ನಾಶ ಮಾಡಬೇಕು ಎನ್ನುವ ಪಣವನ್ನು ತೊಟ್ಟರು. ಬಾರೆಬೈಲು ಮತ್ತು ಮಿತ್ತಬೈಲು ಎರಡೂ ಕಡೆಗಳಲ್ಲಿಯೂ ಇದಕ್ಕಾಗಿ ಸಿದ್ಧತೆಗಳು ನಡೆಯತೊಡಗಿದವು. ಯಮುನಕ್ಕನಿಗೆ ಇರುವ ದ್ವೇಷ ಪ್ರಬಲವಾದುದು. ಅದಕ್ಕಾಗಿ ಗಾಂಧಿವಾದಿಯಾದ ಸುಬ್ಬಯಣ್ಣನನ್ನು ಹಾಗೂ ಪಟೇಲ ರಾಮಣ್ಣನನ್ನು ಕೇಸಿಗೆ ಸಂಬಂಧಪಟ್ಟ ತಯಾರಿ ನಡೆಸಲು ಮಂಗಳೂರಲ್ಲೇ ಉಳಿಯುವಂತೆ ಉದ್ದೇಶಪೂರ್ವಕವಾಗಿ ಹೇಳಿಬಿಡುತ್ತಾಳೆ. ಮಿತ್ತಬೈಲಿನ ಯುವಕರು, ಕೆಲಸದವರು, ಕೇರಿಯ ಮುಗೇರರು, ಮಜಲೋಡಿಯ ಯುವಕರು ಎಲ್ಲಾ ಸೇರಿ ಸುಮಾರು ನಲ್ವತ್ತು ಮಂದಿಗೆ ಯಮುನಕ್ಕನೇ ಮಾರ್ಗದರ್ಶನ ಕೊಡುತ್ತಿದ್ದಳು. ಬೆಟ್ಟುಗದ್ದೆಯಲ್ಲಿ ಶೇಂದಿ, ಕೋಳಿಮಾಂಸದ ಊಟ ಮುಗಿಸಿ, ಮಲರಾಯನ ಗುಂಡಕ್ಕೆ ನಮಸ್ಕರಿಸಿ ಚಾವಡಿಯ ಕಂಬಕ್ಕೊರಗಿ ಕುಳಿತಿದ್ದ ಯಮುನಕ್ಕ ಹೇಳುತ್ತಾಳೆ. ಇದು ಅವಳ ವೀರತ್ವದ ಸಂಕೇತ. ಗುತ್ತಿನ ಮಾನ ಕಾಪಾಡುವುದಕ್ಕೆ ತಯಾರಾಗಿ ನಿಂತಿರುವ ಯಮುನಕ್ಕನನ್ನೂ 'ಬರುವುದು ಬೇಡ' ಎಂದರೂ, 'ನನ್ನ ಮಕ್ಕಳನ್ನು ರಣರಂಗಕ್ಕೆ ಕಳುಹಿಸಿ, ನನಗೆ ಮನೆಯಲ್ಲಿ ಕುಳಿತಿರಲು ಸಾಧ್ಯವೇ? ಹೊರಡಿ, ನಾನು ಮಲರಾಯನ ಗುಂಡದ ದೀಪ ಹೊತ್ತಿಸಿ ಬರುತ್ತೇನೆ. ನಾನು ಬಂದು ತಲುಪುವವರೆಗೆ ಏನೂ ಮಾಡಬೇಡಿ. ನಾನು ಬಂದು ತಲುಪುವಾಗ ಚಂದ್ರ ಉದಯಿಸಿ ಬೆಳಕಾಗುತ್ತದೆ. ಅನಂತರ ಬೇಟೆ ಪ್ರಾರಂಭಿಸೋಣ. ಕಂಪೆನಿ ಸರಕಾರ ಮಂಜಣಾಳ್ವರಿಗೆ ಬಹುಮಾನವಾಗಿ ಕೊಟ್ಟಿದ್ದ ಜೋಡು ನಳಿಗೆಯ ಕೋವಿಯನ್ನು ಹಿಡಿದುಕೊಂಡು ದಂಡನಾಯಕನಂತೆ ಯಮುನಕ್ಕ ಮುಂದುವರಿಯುತ್ತಾಳೆ. ಮೊದಲೇ ಕೊಟ್ಟಿರುವ ಸೂಚನೆಯಂತೆ ಚಾವಡಿಗೆ ಗುಂಡಿನ ಮಳೆ ಸುರಿಯಲಾರಂಭಿಸಿತು. ಹಟ್ಟಿ, ಕೊಟ್ಟಿಗೆ, ಬೆಂಕಿಯಿಂದ ಉರಿಯಲಾರಂಭಿಸಿತು. ಉರಿಯುವ ಪಂಜುಗಳನ್ನು ಮನೆಯ ಮಾಡಿಗೆ ಹಾಗೂ ಚಾವಡಿಯ ಕೆಳಗೆ ಎಸೆದು ಮನೆಯನ್ನು ಸುಡುತ್ತಾರೆ. ಇಡೀ ಚಾವಡಿಗೆ ಬೆಂಕಿ ಹತ್ತಿಕೊಂಡಾಗ ತಲವಾರು ಹಿಡಿದ ತ್ಯಾಂಪಣ್ಣನು ಕಾಳಭೈರವನಂತೆ ಬರುತ್ತಾನೆ. ತ್ಯಾಂಪಣ್ಣ ತಲವಾರು ಬೀಸಿದಾಗ ಯಮುನಕ್ಕ ಕೋವಿ ಅಡ್ಡ ಹಿಡಿಯುತ್ತಾಳೆ. ತಲವಾರು ಮತ್ತು ಕೋವಿ ಎರಡೂ ಕೆಳಗೆ ಬೀಳುತ್ತದೆ. ಕೈಹಿಡಿದು ಎಳೆಯಲು ಬಂದ ತ್ಯಾಂಪಣ್ಣನನ್ನು ಹಿಡಿದು ತನ್ನ ಕಂಕುಳಲ್ಲಿ ಅವನ ಕುತ್ತಿಗೆಯನ್ನು ಅಮುಕಿ ಹಿಡಿದುಕೊಂಡಳು. ಅವನಿಗೆ ಉಸಿರಾಡಲೂ ಸಾಧ್ಯವಾಗದಂತೆ ಗಟ್ಟಿಯಾಗಿ ಒಂದು ಸುತ್ತು ತಿರುಗಿಸಿದಾಗ ಗಾಯಗೊಂಡ ದೆಯ್ಯು ಬಂದು ಭರ್ಜಿಯಿಂದ ತ್ಯಾಂಪಣ್ಣನ ಹೊಟ್ಟೆಗೆ ತಿವಿದನು. ತ್ಯಾಂಪಣ್ಣ ಯಮುನಕ್ಕನ ಕಂಕುಳಲ್ಲಿಯೇ ಪ್ರಾಣಬಿಡುತ್ತಾನೆ. ಬಾರೆಬೈಲಿನ ಮನೆ, ಕೊಟ್ಟಿಗೆ, ಹಟ್ಟಿ, ಹೊತ್ತಿ ಉರಿದು

ಹೋದವು. ಗುದ್ದಲಿ, ಹಾರೆ, ಸನಿಕೆಗಳ ಮೂಲಕ ಮನೆಯ ಗೋಡೆಯನ್ನು ಕೆಡವಿ, ಗದ್ದೆಯ ಬದಿಯಲ್ಲಿ ಹರಿದು ಬರುವ ನೀರನ್ನು ಅಂಗಳಕ್ಕೆ ತಿರುಗಿಸಿದ್ದಾರೆ. ಮಿತ್ತಬೈಲಿನಿಂದ ಅಟ್ಟಿಕೊಂಡು ಬಂದಿರುವ ಕೋಣಗಳನ್ನು ಕಟ್ಟಿ ಇಡೀ ಹಿತ್ತಲನ್ನು ಉಳತೊಡಗಿದರು. ಹಿತ್ತಲಲ್ಲಿ ಗುಂಡಿ ತೋಡಿ ಬಾಳೆಗಿಡ ನೆಟ್ಟರು. ಅದಕ್ಕೆ ಬಿದಿರಿನ ಬೇಲಿಯನ್ನು ಹಾಕಿ ಮುಗಿಸಿದಾಗ ಅಲ್ಲೊಂದು ಮನೆ, ಹಟ್ಟಿ ಇತ್ತು ಎಂಬ ಚಿಕ್ಕ ಕುರುಹು ಕೂಡಾ ಉಳಿಯಲಿಲ್ಲ. ಅರ್ಧಂಬರ್ಧ ಸುಟ್ಟ ವಸ್ತು, ಕಳ್ಳಿ ಕೋವಿಗಳನ್ನು ಬಾವಿಗೆ ಹಾಕಿ ಮುಚ್ಚಿ ಅದರ ಮೇಲೆಯೂ ಬಾಳೆಗಿಡ ನೆಟ್ಟರು. ಅಲ್ಲೊಂದು ಬಾವಿ ಇತ್ತು ಎನ್ನುವ ಯಾವುದೇ ಸುಳಿವು ಸಿಗದಂತೆ ಮಾಡಿದರು. ಹೊಸತಾಗಿ ಬಂದು ನೋಡಿದವರಿಗೆ ಅಲ್ಲೊಂದು ಮನೆ ಇತ್ತು. ಸಂಸಾರವಿತ್ತು ಎನ್ನುವ ಯಾವುದೇ ಸುಳಿವು ಕಾಣಿಸದಂತೆ ಮಾಡಿದರು. ಯಮುನಕ್ಕನ ದ್ವೇಷದ ಪ್ರತಿಕಾರ ಹೇಗಿತ್ತು ಎನ್ನುವುದು ಇಲ್ಲಿ ಗೋಚರವಾಗುತ್ತದೆ. ತಮ್ಮ ಗೌರವಕ್ಕೆ, ಮನೆತನಕ್ಕೆ ತಡೆಯನ್ನುಂಟುಮಾಡಿದವರನ್ನು ಸುಮ್ಮನೆ ಬಿಡುವ ಸ್ವಭಾವ ಅವರದಲ್ಲ. ಬಾರೆಬೈಲಿನ ಸಂಸಾರವೇ ದಿಕ್ಕುಪಾಲಾಗಿ ಹೋಗುವಂತೆ ಯಮುನಕ್ಕ ಮಾಡಿಬಿಡುತ್ತಾಳೆ. ಆದ್ದರಿಂದ ಯಮುನಕ್ಕ ಸರಿ ತಪ್ಪುಗಳನ್ನು ವಿವೇಚಿಸುವ ದುರ್ಗೆಯಂತೆ ಮೂಡಿ ಬರುತ್ತಾಳೆ. ಗುತ್ತು ಸಂಸ್ಕೃತಿಯನ್ನು ಉಳಿಸುವ ಸ್ಪಷ್ಟ ಚಿತ್ರಣವು ಇಲ್ಲಿ ಸಾಕಾರಗೊಳ್ಳುತ್ತದೆ. ಮಹಿಳೆಯರೂ ಕೂಡಾ ಗುತ್ತಿನ ಮನೆಯ ಆಡಳಿತವನ್ನು ವಹಿಸಿ ಮನೆಯ ಏಳಿಗೆಗಾಗಿ ಯಾವ ತ್ಯಾಗಕ್ಕೂ ಸಿದ್ಧರಾಗಿರುತ್ತಾರೆ. ಕಾನೂನಿನ ದೃಷ್ಟಿಯಲ್ಲಿ ನಾನು ಅಪರಾಧಿಯಾಗಿ ಬಿಡುತ್ತೇನೆ ಎನ್ನುವ ಭಯವೂ ಕೂಡಾ ಕಾಣಿಸದೆ, ಹೆಂಗಸರು, ಮಕ್ಕಳು, ದನ, ಕರು ಎನ್ನುವ ಮಮತೆ ತಾಯಿ ಹೃದಯಕ್ಕೂ ಕೂಡ ಇಲ್ಲ ಎನ್ನುವ ರೂಪದಲ್ಲಿ ಪ್ರತೀಕಾರದ ಹಗೆ ಹಬ್ಬಿದೆ. ಗುತ್ತುಗಳಲ್ಲಿ ಈ ತರಹದ ಘರ್ಷಣೆಗಳು ನಡೆಯುತ್ತಿತ್ತು ಎನ್ನುವ ಅಂಶ ಸ್ಪಷ್ಟವಾಗುತ್ತದೆ. ಅಧಿಕಾರವನ್ನು ಪಡೆಯಲು ಅನುಸರಿಸುವ ಮಾರ್ಗಗಳಲ್ಲಿ ಇದೂ ಒಂದು ಎನ್ನುವುದು ವ್ಯಕ್ತಗೊಳ್ಳುತ್ತದೆ.

ಭೂತವನ್ನು ಮುಂದಿಟ್ಟುಕೊಂಡು ರಾಜಕೀಯ ನಡೆಸುವುದು ಅಧಿಕಾರವುಳ್ಳ ಗುತ್ತು ಮನೆಯ ಲಕ್ಷಣವಾಗಿದೆ. ಭೂತನರ್ತನವು ಜನಪದ ಆರಾಧನಾ ಪದ್ಧತಿ. ಇಲ್ಲಿ ಭೂತದ ಆವೇಶ ಬರುವುದು ಕ್ಷಣಕಾಲ ಮಾತ್ರ. ಉಳಿದ ಸಮಯವೆಲ್ಲವೂ ಭೂತ ನರ್ತನ ಸ್ವಸಾಮರ್ಥ್ಯ. ಆದರೆ ಆ ಸಂದರ್ಭದಲ್ಲಿ ಸೇರಿರುವ ಜನರ ಎದುರು ಹೇಳುವ ಮಾತುಗಳು ಉತ್ತಮವಾದ ಪರಿಣಾಮವನ್ನುಂಟುಮಾಡುತ್ತದೆ. ಇದನ್ನು ಸದುಪಯೋಗ ಪಡಿಸಿಕೊಳ್ಳುವ ಉದ್ದೇಶದಿಂದಾಗಿ ಭೂತನರ್ತಕನ ಮೇಲೆ ಪ್ರಭಾವವನ್ನು ಬೀರಿ, ಭಯವನ್ನು ಹುಟ್ಟಿಸಿ ತಮ್ಮ ಪರವಾಗಿ ಕೆಲಸವನ್ನು ಮಾಡಿಸುವ ಕ್ರಮವು ಸಮಾಜದಲ್ಲಿದೆ. ಇದು ಆರ್ಥಿಕವಾಗಿ ಪ್ರಬಲರಾದವರಿಗೆ ಮಾತ್ರ ಸಾಧ್ಯ. ಆದ್ದರಿಂದ ಗುತ್ತು ಸಂಸ್ಕೃತಿಯಲ್ಲಿ ಭೂತವನ್ನು

ಮುಂದಿಟ್ಟುಕೊಂಡು ರಾಜಕೀಯ ನಡೆಸುವುದು ಕಾಣಸಿಗುತ್ತದೆ. ಇದರಿಂದಾಗಿ ಮಿಥ್ಯ ಸತ್ಯವಾಗಬಹುದು, ಸಿಗದೇ ಇರುವ ಅವಕಾಶಗಳು ಸಿಗಬಹುದು. ಇವುಗಳು ಕಾದಂಬರಿಯಲ್ಲಿ ವಿವರವಾಗಿ ಲಭ್ಯವಾಗುತ್ತದೆ. ಮಲರಾಯ ಭೂತದ ಪಾತ್ರಿ ಅಮ್ಮಣ ಪೂಜಾರಿ ಅಲ್ಲಿಯ ತನಕ ಗುತ್ತಿನ ಮನೆಯ ವಿಷಯದಲ್ಲಿ ಭಾರೀ ಭಯಭಕ್ತಿ ಇರುವವ. ಅಮ್ಮಣ್ಣ ಒಕ್ಕಲಿಗನರಲ್ಲಿ ಸ್ವಲ್ಪ ದೊಡ್ಡ ಕುಳ. ಹಾಗೆಯೇ ಮಾಂಕರಾಲರ ಬಲಗೈ ಬಂಟ. ಆತ ಸಾಯುವಾಗಲೂ ಜೊತೆಗೆ ಇದ್ದವ. ಭೂತದ ಪಾತ್ರಿಗೆ ಮಿತ್ತಬೈಲ್‌ನ ಯಜಮಾನನ ಬಗ್ಗೆ ಕೇಳುವ ಅವಕಾಶವಿಲ್ಲ. ಆದರೂ ಕೇಳಿದೆ ಎಂದ ಮೇಲೆ ಇದರಲ್ಲಿ ಯಾರದೋ ಪ್ರಭಾವ ಇರಬೇಕು. ಅದಕ್ಕಾಗಿ ಆ ರೀತಿಯಲ್ಲಿ ಕೇಳಿದೆ ಎಂದು ಭಾವಿಸುತ್ತಾರೆ. ಅಮ್ಮಣ ಪೂಜಾರಿ ತ್ಯಾಂಪಣ್ಣನ ಮಾತಿನಂತೆ ದರ್ಶನದಲ್ಲಿ ಆ ರೀತಿ ಕೇಳಿದ್ದಾನೆ. ಮಿತ್ತಬೈಲ್‌ನ ಯಜಮಾನರ ಆಕಾಂಕ್ಷೆಗಳ ಪಟ್ಟಿಯಲ್ಲಿ ತ್ಯಾಂಪಣ್ಣನ ಬೆಂಬಲಿಗನು (ಮಾಂಕರಾಲರ ಮಗ ಗುಡ್ಡಪ್ಪ) ಇದ್ದಾನೆ. ಅದಕ್ಕಾಗಿ ದರ್ಶನದಲ್ಲಿ ಅದರ ಬಗ್ಗೆ ಕೇಳಲು ಅಮ್ಮಣ ಪೂಜಾರಿಗೆ ತ್ಯಾಂಪಣ್ಣ ಒತ್ತಾಯಿಸಿದ್ದಾನೆ.

ಸಂಜೆಯ ನೇಮದಲ್ಲಿ ಅಮ್ಮಣ ಪೂಜಾರಿ ಮತ್ತೆ ಬಾಯಿ ತೆರೆಯದಂತೆ ಅಥವಾ ಆ ನಲಿಕೆಯವ ಕಟ್ಟಿದ ನೇಮದಲ್ಲಿ ಏನೂ ಬೊಗಳದಂತೆ ನೋಡಿಕೊಳ್ಳಬೇಕು ಇದಲ್ಲದೆ ಸಂಜೆಯ ನೇಮಕ್ಕೆ ತ್ಯಾಂಪಣ್ಣ ಶೆಟ್ಟಿ ಎಲ್ಲಿಯಾದರೂ ಬಂದರೆ ಇನ್ನೂ ಜಾಗ್ರತೆಯಲ್ಲಿರಬೇಕು ಎಂದು ಮಿತ್ತಬೈಲಿನಲ್ಲಿ ತೀರ್ಮಾನಿಸುತ್ತಾರೆ.

ನಲಿಕೆಯವರಲ್ಲಿ ಹೇಳುವ ಕೆಲಸವನ್ನು ಯಮುನಕ್ಕನ ಸಾಕುಮಗ ದುಗ್ಗಪ್ಪ ಮಾಡುತ್ತಾನೆ. ಮುಂಗೋಪಿಯಾದ ದುಗ್ಗಪ್ಪ ಹೋದನೆಂದರೆ ನಲಿಕೆಯವನ ಗರ್ಭದಲ್ಲಿ ಚಳಿ ಹಿಡಿಯಬೇಕು. ನೇಮಕ್ಕೆ ತಯಾರಿ ಮಾಡಲು ಬಂದಿರುವ ಅಮ್ಮಣ ಪೂಜಾರಿಗೂ ಹೇಳುವಂತಹದು ಹೇಳಿಬಿಡು ಎಂದು ದುಗ್ಗಪ್ಪನಲ್ಲಿ ಯಮುನಕ್ಕ ಹೇಳಿದಾಗ, ಅಮ್ಮಣ ಪೂಜಾರಿಗೂ ಅರ್ಥವಾಯಿತು. ಭೂತದ ಭಂಡಾರವನ್ನೂ ಭೂತದ ಚಾಕರಿಯವರು ಒಬ್ಬೊಬ್ಬರೇ ಹಿಡಿದುಕೊಂಡು ಅಂಗಳದಲ್ಲಿ ಸಾಲು ನಿಂತರು. ಭೂತದ ಪಾತ್ರಿ ಅಮ್ಮಣ ಪೂಜಾರಿ ಒಬ್ಬೊಬ್ಬರನ್ನೇ ಕರೆಯುತ್ತಾ ಸುತ್ತಮುತ್ತ ನೋಡಿ ತ್ಯಾಂಪಣ್ಣನನ್ನು ಹುಡುಕುವಾಗ ಅವನ ಕಣ್ಣಿಗೆ ಬಿದ್ದದ್ದು ಬಾಳುಕತ್ತಿ ಸೊಂಟಕ್ಕೆ ಸಿಕ್ಕಿಸಿಕೊಂಡು ಕಾಸರಕನ ಕೋಲು ಹಿಡಿದುಕೊಂಡು ನಿಂತಿದ್ದ ದುಗ್ಗಪ್ಪ. ಇದನ್ನು ನೋಡಿ ಅವನ ಎದೆಬಡಿತ ನಿಂತಂತಾಯಿತು. ತಕ್ಷಣ ತಿರುಗಿ ತಂತ್ರಿಯವರಲ್ಲಿ ನೇಮಕ್ಕೆ ಅನುಮತಿ ಕೇಳಿಕೊಳ್ಳುತ್ತಾನೆ.

ಭೂತದ ಮಾತಿನಂತೆ ನಡೆದುಕೊಳ್ಳಬೇಕು ಎನ್ನುವುದು ಸಮಾಜರೂಢಿ. ಅದಕ್ಕಾಗಿ ಭೂತದ ಬಾಯಿಯಿಂದ ಬರುವ ಮಾತುಗಳನ್ನು ತಮ್ಮ ಪರವಾಗಿ ಬರಿಸುವುದು ಸಮಾಜದಲ್ಲಿದೆ. ಅದು ಸಾಮಾನ್ಯವಾಗಿ ರಾಜಕೀಯದಲ್ಲಿ ಹಣ ಮತ್ತು ಅಧಿಕಾರವಿದ್ದವರಿಗೆ ಮಾತ್ರ ಸಾಧ್ಯವಾಗುವ ಕೆಲಸ. ಇದನ್ನು ಗುತ್ತಿನ ಅಧಿಕಾರವುಳ್ಳವರು ತಮ್ಮ ತಪ್ಪನ್ನು ಮುಚ್ಚಿಡಲು ಅಥವಾ ತಮ್ಮ ಹೆಸರು ಇನ್ನೂ ಪ್ರಸಿದ್ಧಿಯಾಗಲು ಭೂತವನ್ನು ಒಂದು ಮಾಧ್ಯಮದಂತೆ ಬಳಸಿಕೊಳ್ಳುತ್ತಿದ್ದರು. ಭೂತ ಹೇಳುವ ನುಡಿ ವೇದವಾಕ್ಯವೆಂದು ಜನರು ನಂಬುತ್ತಾರೆ. ಆದ್ದರಿಂದ ಇಂತಹ ಘಟನೆಗಳು ಬೇಕಾದಷ್ಟು ನಡೆಯುತ್ತವೆ.

ಗುತ್ತಿನ ಮನೆಯ ಇನ್ನೊಂದು ಗೌರವದ ಜವಾಬ್ದಾರಿಯೆಂದರೆ ಅರಸರ ಪಟ್ಟಾಭಿಷೇಕದ ಸಮಯ ಅವರ ಕೈಹಿಡಿದುಕೊಂಡು ಹೋಗಿ ಸಿಂಹಾಸನದಲ್ಲಿ ಕುಳ್ಳಿರಿಸುವ ಹಕ್ಕು. ಉಂಗುರ ಹಾಕುವ, ಕತ್ತಿ ಕೈಗೆ ಕೊಡುವ, ಪಟ್ಟದ ಹೆಸರಿನಿಂದ ಕರೆಯುವ ಕೆಲಸ ಅವರದು. ಇದು ಸಾಮಾನ್ಯವಾದ ಗೌರವವಲ್ಲ. ಅರಸರ ಮತ್ತು ಗುತ್ತಿನವರ ನಂಬಿಕೆಯ ಪ್ರಶ್ನೆ. ಗ್ರಾಮ ಮಟ್ಟದಲ್ಲಿಯೇ ರಾಜರಿಗೆ ಅನುಕೂಲವಾಗುವ ಎಲ್ಲಾ ಕೆಲಸವನ್ನು ಗುತ್ತಿನವರೇ ಮಾಡುವುದರಿಂದ ಈ ಅಧಿಕಾರವು ಲಭಿಸುತ್ತದೆ. ಒಂದು ರಾಜ್ಯದಲ್ಲಿ ಹಲವಾರು ಗುತ್ತುಗಳಿರುವಾಗ ಅದಕ್ಕೆ ಪೂರ್ವ ನಿಯಮದಂತೆ ಸ್ಥಾನ ಲಭಿಸುತ್ತಿತ್ತು. ಈ ಅಧಿಕಾರವನ್ನು ಎಂದೂ ಕೂಡ ಅವರು ಕಳೆದುಕೊಳ್ಳುತ್ತಿರಲಿಲ್ಲ.

ಕಾದಂಬರಿಯಲ್ಲಿ ಬರುವ ಸುಬ್ಬಯಣ್ಣನ ಪಾತ್ರದ ಮುಖಾಂತರ ಸ್ವಾತಂತ್ರ್ಯ ಹೋರಾಟದ ಅಂಶಗಳು ವ್ಯಕ್ತಗೊಳ್ಳುತ್ತವೆ. ಗುತ್ತು ಸರ್ವಾಧಿಕಾರವನ್ನು ವಿರೋಧಿಸುವಲ್ಲಿಯೂ ತನ್ನತನವನ್ನು ತೋರಿಸಿಕೊಂಡಿದೆ. ರಾಜಪ್ರಭುತ್ವವಿದ್ದಾಗ, ಗುತ್ತಿಗೂ ಅಧಿಕಾರವಿದೆ. ದೇಶ ಸ್ವಾತಂತ್ರ್ಯವನ್ನು ಪಡೆದು ಉಳುವವನೇ ಹೊಲದೊಡೆಯನಾಗುವ ಸಂದರ್ಭ ಬಂದಾಗಲೂ ಅದನ್ನು ಸ್ವಾಗತಿಸುತ್ತದೆ. ಸಮಾನತೆಯ ಚಿಂತನೆಯನ್ನೂ ಒಳಗೊಂಡು ಎಲ್ಲರ ಏಳಿಗೆಯನ್ನು ಬಯಸುತ್ತದೆ. ಅದರ ಪರಿಣಾಮವಾಗಿ ಗುತ್ತಿನ ಆಸ್ತಿ ಇಂದು ಒಕ್ಕಲಿನವರ ಪಾಲಾಗಿದೆ.

ಸುಬ್ಬಯಣ್ಣ ಗಾಂಧೀ ತತ್ವಕ್ಕೆ ಪ್ರಭಾವಿತರಾದವರು. ಅವರಿಗೆ ಗುತ್ತು, ಗುತ್ತಿನ ಅಧಿಕಾರ, ದೈವದ ಗಡಿ ಹಿಡಿಯುವುದು ಇತ್ಯಾದಿಗಳಲ್ಲಿ ಆಸಕ್ತಿಯಿಲ್ಲ. ಅವರ ಕಾಲದಲ್ಲಿ ಗಾಂಧೀಜಿಯವರ ಸ್ವಾತಂತ್ರ್ಯ ಹೋರಾಟವು ದಕ್ಷಿಣಕನ್ನಡದಲ್ಲಿ ಕಾರ್ನಾಡು ಸದಾಶಿವರಾಯರ ನಾಯಕತ್ವದಲ್ಲಿ ಹರಡಿತ್ತು. ಕಾಸರಗೋಡು-ಕುಂಬಳೆಯಲ್ಲಿ ಉಮೇಶರಾಯರು, ದೇವಪಾಳ್ವರ ಮುಂದಾಳುತನದಲ್ಲಿ ಆಂದೋಲನ ಆರಂಭಗೊಂಡಿತ್ತು. ಪೊಳಲಿ ಶೀನಪ್ಪ ಹೆಗ್ಡೆಯವರು ಅತ್ತಾವರದ ಶೆಟ್ಟರು ಸ್ವಾತಂತ್ರ್ಯದ ಸಂದೇಶ

ಬಿತ್ತತೊಡಗಿದರು. ಇದರ ಫಲವಾಗಿ ಗುತ್ತಿನ ಯುವಕರು ಸ್ವಾತಂತ್ರ್ಯ ಹೋರಾಟಕ್ಕೆ ಆಕರ್ಷಿತರಾದರು. ಸುಬ್ಬಯಣ್ಣ ದೇವಪ್ಪ ಆಳ್ವರ ಜೊತೆ ಚಳುವಳಿಯಲ್ಲಿ ಸೇರಿಕೊಂಡರು. ಇದರಿಂದಾಗಿ ಗುತ್ತಿನ ರಾಜಕೀಯ ಬದಿಗೆ ಸರಿದು ಸ್ವಾತಂತ್ರ್ಯ ಹೋರಾಟ ಪ್ರಮುಖವಾಯಿತು. ಗಾಂಧೀ ಆಶ್ರಮಕ್ಕೆ ಬಂದು ಅಲ್ಲಿಯ ಶಿಷ್ಯರೊಂದಿಗೆ ನಿತ್ಯದ ಕೆಲಸದಲ್ಲಿ ತೊಡಗಿಸಿಕೊಂಡರು. ದಲಿತರ ಕೇರಿಯ ಪಾಯಿಖಾನೆಯನ್ನು ಸ್ವಚ್ಛ ಮಾಡುವುದು, ಆಶ್ರಮದ ಸುತ್ತ ತರಕಾರಿ ಬೆಳೆಸುವ ಕೆಲಸ ಅವರದಾಯಿತು. ಗುತ್ತಿನ ಮನೆಯಲ್ಲಿ ಕೈಗೊಂದು ಕಾಲಿಗೊಂದು ಜನರನ್ನು ಇಟ್ಟುಕೊಂಡು ಯಜಮಾನಿಕೆಯನ್ನು ಮಾಡಬೇಕಾದ ಸುಬ್ಬಯಣ್ಣನಿಗೆ ಈ ಕೆಲಸವನ್ನು ಮಾಡಲು ಸಾಧ್ಯವಾಗದೆ ಕಣ್ಣೀರು ಬರುತ್ತಿತ್ತು. ಆ ಗಾಂಧಿ ಹೇಳಿದ ಮಾತು "ಈ ಪಾಯಿಖಾನೆ ತೊಳೆಯುವ ಕೆಲಸ ತಾನು ದೊಡ್ಡ ಮನೆತನದವನೆಂಬ ಅಹಂಕಾರದಿಂದ ಬಿಡುಗಡೆಗೊಳಿಸಿ, ಮಾನವರೆಲ್ಲರೂ ಒಂದೇ ಎಂಬ ಸಮಾನತೆಯನ್ನು ಕಲಿಸಿಕೊಡುತ್ತದೆ."[1] ಸುಬ್ಬಯಣ್ಣನ ಮೇಲೆ ಗಾಢ ಪರಿಣಾಮವನ್ನುಂಟುಮಾಡಿತು. ಗಾಂಧಿಯ ಜೊತೆ ಸೇರಿ ಅಸಹಕಾರ ಚಳುವಳಿಯಲ್ಲಿ ಜೈಲುವಾಸವನ್ನನುಭವಿಸಿದರು. ಶ್ರೀಮಂತಿಕೆಯ ಸುಪ್ಪತ್ತಿಗೆಯಲ್ಲಿ ಮಲಗಬೇಕಾದ ವ್ಯಕ್ತಿ ಜೈಲಿನ ಸುಖವನ್ನನುಭವಿಸಿದರು. ಅಧಿಕಾರ, ಕೋಪ, ಪೆಟ್ಟು ಇತ್ಯಾದಿ ಗುಣಗಳಿಂದಲೇ ಗುತ್ತು ಕೂಡಿದೆ ಎಂದು ಭಾವಿಸಿದ ಚಿತ್ರಣ ಇಲ್ಲಿ ತೀರಾ ಭಿನ್ನವಾಗಿದೆ. ಗಾಂಧೀಜಿಯ ಅಹಿಂಸಾ ಹೋರಾಟ, ಸತ್ಯಾಗ್ರಹದ ಮೂಲಕ ಜನರನ್ನು ಭಾಗಿಯಾಗಿಸಿ 'ಗುತ್ತು' ಈ ರೀತಿಯಲ್ಲಿಯೂ ಇದೆ ಎನ್ನುವ ವಿವರ ಇಲ್ಲಿ ವ್ಯಕ್ತಗೊಳ್ಳುತ್ತದೆ. "ಒಂದು ದಿನ ಪೋಲೀಸನೊಬ್ಬ ಗಾಂಧೀಜಿಗೆ ಬೀಸಿದ ಲಾಠಿಯ ಪೆಟ್ಟಿಗೆ ಸುಬ್ಬಯಣ್ಣ ತನ್ನ ಬೆನ್ನು ತೋರಿಸಿ, ಪೋಲಿಸ್ ಪೇದೆಯ ಬೆತ್ತ ಎಳೆದು ತುಂಡು ತುಂಡು ಮಾಡಿದರು. ಪೋಲಿಸ್ ಅವರನ್ನು ಹೊಡೆದು ರಸ್ತೆಯಲ್ಲಿ ಜುಟ್ಟು ಹಿಡಿದು ಎಳೆದುಕೊಂಡು ಹೋಗುವಾಗ ಏನೂ ಭಯಪಡದೆ ತನ್ನ ದೈಹಿಕ ಹಾಗೂ ಮಾನಸಿಕ ಶಕ್ತಿಯ ಪರಿಚಯ ತೋರಿಸಿದರು. ಜೈಲು ಅವರ ಪಾಲಿಗೆ ಗುತ್ತಿನ ಮನೆಯಂತಾಯಿತು.

ಒಕ್ಕಲಿನವರನ್ನು, ಮೂಲದ ಮುಗೇರರನ್ನು ಗದರಿಸುತ್ತಾ, ದುಡಿಸುತ್ತಾ ಗುತ್ತಿನ ಮನೆಯಲ್ಲಿ ಅಧಿಕಾರ, ಗೌರವವನ್ನೂ ಪಡೆಯುತ್ತಿದ್ದ ವ್ಯಕ್ತಿ ಸ್ವಾತಂತ್ರ್ಯಕ್ಕೋಸ್ಕರ ಸಮಾನತೆಗೋಸ್ಕರ ಈ ತರಹದ ಶಿಕ್ಷೆಯನ್ನು ಪಡೆಯುತ್ತಿದ್ದಾರೆ. ಇದು ಗುತ್ತಿನ ತ್ಯಾಗ ಗುಣದ ಸಂಕೇತ. ಹಿರಿಯ ವ್ಯಕ್ತಿಗಳ ಜ್ಞಾನಿಗಳ ಒಡನಾಟದ ಪರಿಣಾಮವಾಗಿ "ನಿಜವಾದ ಸ್ವಾತಂತ್ರ್ಯವೆಂದರೆ ಗ್ರಾಮಸ್ವರಾಜ್ಯ" ಎನ್ನುವ ಪಾಠವನ್ನು ಕಲಿತರು. ಗ್ರಾಮದಲ್ಲಿರುವ ಬಡವರು, ಒಕ್ಕಲಿನವರು, ಮೂಲದವರ ಬದುಕನ್ನು ಕಲ್ಪಿಸಿಕೊಂಡು ಗ್ರಾಮ

---

೧ ಮಹಮ್ಮದ್ ಕುಳಾಯಿ – ಮಿತ್ತಬೈಲ್ ಯಮುನಕ್ಕ – ಪು.ಸಂ. ೨೦೫

ಸ್ವರಾಜ್ಯದ ಬಗ್ಗೆ ಚಿಂತನೆ ನಡೆಸಿದವರು. ಎಲ್ಲರಿಗೂ ಶಿಕ್ಷಣ, ಅದರಲ್ಲಿಯೂ ಹೆಣ್ಣುಮಕ್ಕಳು ಶಿಕ್ಷಣವನ್ನು ಪಡೆಯಬೇಕು ಎನ್ನುವ ನಿರ್ಧಾರಗಳು ಬಲವಾಯಿತು. ದಲಿತರ ಶಿಕ್ಷಣ, ಅವರ ಮಧ್ಯಪಾನದ ಅಭ್ಯಾಸದ ಬಿಡುಗಡೆ, ದೇವಸ್ಥಾನಕ್ಕೆ ಮುಕ್ತಪ್ರವೇಶ, ಊರಿನ ನೇಮ, ಅಂಕ ಆಯನಗಳಲ್ಲಿ ಅವರು ಹೇಗೆ ಬೆರೆತು ಒಂದಾಗಬಹುದು? ಇತ್ಯಾದಿ ವಿಷಯಗಳನ್ನು ಚರ್ಚಿಸಿ ಅಂತಿಮ ನಿರ್ಧಾರಕ್ಕೆ ಬರುತ್ತಾರೆ. ಮೇಲ್ಜಾತಿಯವರಿಗೆ ಅನನುಕೂಲವಾಗುವ ಈ ಪದ್ಧತಿಗಳನ್ನು ಜಾರಿಗೆ ತರಲು ಹೊರಡುವುದು ಗುತ್ತು ಸಂಸ್ಕೃತಿಯ ಒಂದು ಬಹುಮುಖ್ಯ ಭಾಗ. ಎಲ್ಲರೂ ಶಿಕ್ಷಣವನ್ನು ಪಡೆದು ಮುಂದೆಬಂದಾಗ ತಮ್ಮ ಗದ್ದೆ, ತೋಟಗಳಲ್ಲಿ ದುಡಿಯುವ ವ್ಯಕ್ತಿಗಳು ಯಾರು? ಎನ್ನುವ ಕಡೆ ಚಿಂತೆಯನ್ನು ಮಾಡದೇ ಹೊಸ ಹೆಜ್ಜೆಯಿಡಲು ತೊಡಗುತ್ತಾರೆ. ಅಧಿಕಾರ ವರ್ಗದವರಿಗೆ ತಮ್ಮ ಕೆಳಗಿರುವ ವ್ಯಕ್ತಿಗಳು ಸಮಾನ ಅವಕಾಶಗಳನ್ನು ಪಡೆಯುವುದು ಇಷ್ಟವಿಲ್ಲ. ಕಾದಂಬರಿಯಲ್ಲಿ ವ್ಯಕ್ತಗೊಳ್ಳುವ ಈ ಅಂಶವನ್ನು ತ್ಯಾಗ ಮನೋಭಾವವನ್ನಾಗಿ ಪರಿಗಣಿಸಿಕೊಳ್ಳಬಹುದು. ಕೆಲವೇ ಪ್ರಮುಖ ಕೇಂದ್ರ ಸ್ಥಾನಗಳಲ್ಲಿದ್ದ ಶಾಲೆಯನ್ನು ತಮ್ಮ ಹಳ್ಳಿಯಲ್ಲೂ ತೆರೆದು ಹಳ್ಳಿಯ ಜನರಿಗೆ ತಲುಪುವಂತೆ ಮಾಡಬೇಕು. ಆ ಮೂಲಕ ತಮ್ಮ ಹಳ್ಳಿಯ ಅಭಿವೃದ್ಧಿಯನ್ನು ಮಾಡಬೇಕು ಎನ್ನುವ ಕನಸು ನಿಜವಾಗಿಯೂ ಆಶ್ಚರ್ಯಕರವಾದುದು. ಶಿಕ್ಷಣ ಕೇವಲ ಪುರುಷರಿಗೆ ಸೀಮಿತವಲ್ಲ, ಮಹಿಳೆಯು ಅದನ್ನು ಪಡೆಯಬೇಕು. ಅದುವರೆಗೆ ಮಹಿಳೆಗೆ ಶಿಕ್ಷಣಕ್ಕೆ ಅವಕಾಶಗಳು ಕಡಿಮೆಯಿತ್ತು. ಸಮಾಜದ ಮೇಲ್ವರ್ಗದವರು ಮಾತ್ರ ಶಿಕ್ಷಣವನ್ನು ಪಡೆಯುವ ಕಾಲದಲ್ಲಿ ಮಹಿಳೆಯರಿಗೂ ಶಿಕ್ಷಣವನ್ನು ಪಡೆಯುವ ಅವಕಾಶ ಕಲ್ಪಿಸಬೇಕು ಎನ್ನುವ ಆಲೋಚನೆ ಸಾಮಾಜಿಕ ಕ್ರಾಂತಿಗೆ ಸಂಬಂಧಿಸಿದುದು. ಜಾತಿ ತಾರತಮ್ಯವನ್ನು ಹೋಗಲಾಡಿಸಿ ಎಲ್ಲರಿಗೂ ಸಮಾನ ಅವಕಾಶವನ್ನು ಕಲ್ಪಿಸಲು ಹೊರಟಿರುವ ಆಲೋಚನೆಯಿಂದ ಮಾನವರೆಲ್ಲ ಒಂದೆ ಎನ್ನುವ ಚಿಂತನೆ ಕಾಣುತ್ತದೆ. ಈ ರೀತಿಯ ಚಿಂತನೆಗಳಿಂದ ಗುತ್ತು ಸಂಸ್ಕೃತಿಯ ಮೇಲೆ ಬೀರುವ ಪರಿಣಾಮಗಳು ಯಾವುದು? ಗುತ್ತಿನ ಗೌರವ, ಅಧಿಕಾರದ ಸ್ಥಿತಿಯೇನು? ಎನ್ನುವ ಚಿಂತೆಯನ್ನು ಸುಬ್ಬಯಣ್ಣ ಮಾಡುವುದಿಲ್ಲ.

ತಾಯಿಯ ನಿಧನದ ಸುದ್ದಿಯನ್ನು ಕೇಳಿ ಗಾಂಧಿ ಆಶ್ರಮದಿಂದ ಬಂದ ಸುಬ್ಬಯಣ್ಣ, ತಾಯಿಯ ಉತ್ತರಕ್ರಿಯೆಯನ್ನು ಮಾಡಿ ಹಿರಿಯರು ಕಟ್ಟಿಸಿದ ಛತ್ರದಲ್ಲಿ ಕಾಲ ಕಳೆಯಲು ಪ್ರಾರಂಭಿಸಿದರು. ಗಾಂಧೀ ಆಶ್ರಮದ ಅಭ್ಯಾಸ ಇಲ್ಲಿಯೂ ಮುಂದುವರಿಯಿತು. ತಾವು ಕೈಗೊಂಡ ತೀರ್ಮಾನದಂತೆ ಪ್ರಯತ್ನಿಸಲು ತೊಡಗಿದರು. ಬದಲಾವಣೆ ತಕ್ಷಣ ಅಗುವಂತಹುದಲ್ಲ. ಸುಬ್ಬಯಣ್ಣನ ಆಲೋಚನೆಗಳಿಗೆ ಮೇಲುಜಾತಿಯವರ, ಪರಿಶಿಷ್ಟರ ವಿರೋಧ ವ್ಯಕ್ತವಾಯಿತು. ಅದಕ್ಕಾಗಿ ಮಾಂಕರಾಲರು

ಮೇಲ್ಜಾತಿಯವರನ್ನು ಎತ್ತಿಕಟ್ಟಲು ಪ್ರಾರಂಭಿಸಿದರು. ಸರಕಾರವು ಗಾಂಧೀವಾದಿಗಳ ಮೇಲೆ ಕ್ರಮಕೈಗೊಳ್ಳುವ ಸ್ಥಿತಿಯಲ್ಲಿತ್ತು.

ಗಾಂಧೀ ಮತ್ತು ಸುಬ್ಬಯಣ್ಣನ ಸಂಬಂಧವೂ ಬಹಳ ಆತ್ಮೀಯವಾದುದು. ಸುಬ್ಬಯಣ್ಣ ಕೇವಲ ಒಬ್ಬ ಸ್ವಯಂಸೇವಕ ಮಾತ್ರವಲ್ಲ ದೊಡ್ಡ ಮನೆತನದ, ಊರಿಗೆ ಪಟೇಲನಾಗಲಿರುವ ವ್ಯಕ್ತಿ ಎಂದು ಗಾಂಧೀಜಿಗೆ ತಿಳಿದಿತ್ತು. ಸೈಮನ್ ಕಮಿಷನ್ ವಿರುದ್ಧ ಸತ್ಯಾಗ್ರಹ ಕೈಗೊಳ್ಳಲು ಗಾಂಧೀಜಿ ಬಂದಾಗ ಕುಂಬಳೆಯಲ್ಲಿ ಗಾಂಧೀಜಿಯವರನ್ನು ಸ್ವಾಗತಿಸುವ ಕಾರ್ಯಕ್ರಮದ ನಾಯಕ ಸುಬ್ಬಯಣ್ಣ. ಗಾಂಧೀಜಿಯ ಕೊರಳಿಗೆ ಸ್ವಯಂಸೇವಕರು ಹಾಕಿದ ಹಾರವನ್ನು ತೆಗೆದು ಗಾಂಧೀಜಿ ಸುಬ್ಬಯಣ್ಣನ ಕೊರಳಿಗೆ ಹಾಕಿದರು. ಇದರಿಂದ ಅವರ ಸಂಬಂಧದ ಅರಿವಾಗುತ್ತದೆ. ಹಾಗೆಯೇ ಗಾಂಧೀಜಿಯ ನವಸಾರಿಯ ಆಶ್ರಮಕ್ಕೆ ಬಂದ ಗುಜರಾತಿ ಅಡಿಕೆ ಖರೀದಿಯ ಸೇಟೊಬ್ಬ ಸುಬ್ಬಯಣ್ಣನ ಗುರುತು ಹಿಡಿದು, ಆತ ಅಡಿಕೆ ಖರೀದಿಸಲು ಮಿತ್ತಬೈಲು, ಪಟ್ಟದ ಗುತ್ತುಗಳಿಗೆ ಬರುತ್ತಿದ್ದ. ಆಶ್ರಮದ ಸ್ವಯಂ ಸೇವಕರಿಗೆ ಸುಬ್ಬಯಣ್ಣ ದೊಡ್ಡ ಮನೆತನದರು. ಅವರ ಮಾವನ ನಂತರ ಆ ಊರಿಗೆ ಸುಬ್ಬಯಣ್ಣನೇ ಪಟೇಲನಾಗುವವರೆಂದು ಹೇಳಿದಾಗ, ಈ ಪಾಯಿಖಾನೆ ತೊಳೆಯುವ ಯುವಕ ಎಷ್ಟು ದೊಡ್ಡ ವ್ಯಕ್ತಿಯೆಂದು ಎಲ್ಲರಿಗೂ ಆಶ್ಚರ್ಯವಾಯಿತು. ಅಂದಿನಿಂದ ಸುಬ್ಬಯಣ್ಣ 'ಸುಪಾರಿ ಪಟೇಲ'ನಾಗುತ್ತಾರೆ. ಈ ವಿಷಯ ಗಾಂಧಿಯ ಕಿವಿಗೂ ಬಿದ್ದು ಅವರೂ ಕೂಡ 'ಸುಪಾರಿ ಪಟೇಲ'ರೆಂದು ಕರೆಯತೊಡಗಿದರು. ಇದು ಗುತ್ತಿನ ತ್ಯಾಗದ ಗುಣವನ್ನು ಸ್ಪಷ್ಟಪಡಿಸುತ್ತದೆ. ಗಾಂಧೀಜಿಯ ಜೊತೆ ಸೇರಿ ಅನೇಕ ಅಹಿಂಸಾತ್ಮಕ ಹೋರಾಟದಲ್ಲಿ ಭಾಗಿಯಾಗಿ ದೇಶಪ್ರೇಮವನ್ನು ಮೆರೆದರು.

ತುಳುನಾಡಿನ ಆರ್ಥಿಕವಾಗಿ ಸದೃಢರಾಗಿರುವ ಗುತ್ತಿನ ಮನೆಯವರು ವಾಣಿಜ್ಯ ವ್ಯವಹಾರದತ್ತ ತಮ್ಮ ಮನಸ್ಸನ್ನು ಕೇಂದ್ರೀಕರಣಗೊಳಿಸುತ್ತಾರೆ. ಮುಂಬಯಿಯಂತಹ ಮಹಾನಗರಗಳಲ್ಲಿ ಇರುವ ಅನೇಕ ಪ್ರತಿಷ್ಠಿತ ಹೋಟೆಲ್‌ಗಳ ಮಾಲಕರು ಬಂಟರೇ ಆಗಿದ್ದಾರೆ. ಕಾದಂಬರಿಯಲ್ಲಿಯೂ ಈ ಬಗೆಗಿನ ಚಿತ್ರಣ ಕಾಣಿಸಿಕೊಳ್ಳುತ್ತದೆ. ಸ್ವಾತಂತ್ರ್ಯ ಹೋರಾಟಗಾರ ದೇವಪ್ಪಾಳ್ವರ ಜೊತೆ ಸೇರಿ ದೇಶ ಸುತ್ತಿದ ಸುಬ್ಬಯಣ್ಣ ಸುಭಾಷ್ಚಂದ್ರ ಬೋಸರನ್ನು ಕಾಣಲು ರಂಗೂನ್‌ಗೆ ಹೋದರು. ಅಲ್ಲಿ ದೇವಪ್ಪಾಳ್ವರು ನಡೆಸುತ್ತಿದ್ದ ಹೋಟೆಲನ್ನು ನಡೆಸುತ್ತ ಅಲ್ಲಿಯೇ ಉಳಿದು ಬಿಟ್ಟರು. ಅಲ್ಲಿದ್ದುಕೊಂಡು ಸುಭಾಷ್ಚಂದ್ರ ಬೋಸರನ್ನು ಕಂಡು ಮಾತನಾಡಿಸುವ ಅವಕಾಶವೂ ಸಿಕ್ಕಿತು. ಇವರ ಹೋಟೆಲ್ ರಂಗೂನ್‌ಗೆ ಬರುವ ದೊಡ್ಡ ದೊಡ್ಡ ಕಾಂಗ್ರೆಸ್ ನಾಯಕರನ್ನು ಒಟ್ಟು ಸೇರಿಸುವ ಸ್ಥಳವಾಯಿತು. ಅವರ ಹೋಟೆಲನ್ನು ಸ್ವಾತಂತ್ರ್ಯ ಹೋರಾಟದ

ಒಂದು ಕೇಂದ್ರವನ್ನಾಗಿ ಮಾಡಿಕೊಂಡರು. ಹೋಟೆಲ್ ಉದ್ಯಮದ ಮುಖಾಂತರವು ದೇಶ ಸೇವೆಯನ್ನು ಮಾಡುವ ಅಂಶವು ವ್ಯಕ್ತಗೊಳ್ಳುವುದರ ಮೂಲಕ ಗುತ್ತು ಸಂಸ್ಕೃತಿ ಎನ್ನುವುದು ವೈಶಾಲ್ಯತೆಯನ್ನು ಪಡೆಯುತ್ತದೆ.

ಸುಬ್ಬಯಣ್ಣ ಮತ್ತು ಗೋವಿಂದರ ಸಂಬಂಧವೂ ನಂಬಿಕೆಗೆ ಅರ್ಹವಾದ ಗೆಳೆತನದ ಸಂಕೇತ. ಪ್ರಾಚೀನ ಕಾಲದಿಂದಲೂ ಗುತ್ತಿನ ಜೊತೆಗೆ ಸಂಬಂಧವನ್ನು ಇಟ್ಟುಕೊಂಡ ಜನರಿಗಾಗಿ ಯಾವ ತ್ಯಾಗಕ್ಕೂ ಸಿದ್ಧ. ಇದು ಮಂಜನಾಳ್ವನ ಪಾತ್ರದ ಮುಖಾಂತರವೇ ತಿಳಿದುಬರುತ್ತದೆ. ಸುಬ್ಬಯಣ್ಣ ಮತ್ತು ಗೋವಿಂದರು ನಂತರದ ತಲೆಮಾರಿನವರು. ಆದರೂ ಅವರೊಳಗೆ ಆರಂಭದ ಒಡನಾಟದ ಅಂಶಗಳು ವ್ಯಕ್ತಗೊಳ್ಳುತ್ತವೆ. ಇಬ್ಬರೂ ಗಾಂಧೀ ಅನುಯಾಯಿಗಳಾಗಿದ್ದುಕೊಂಡು ಸಂಪೂರ್ಣವಾಗಿ ಆ ಕಾರ್ಯದಲ್ಲಿ ಮಗ್ನರಾಗಿದ್ದಾರೆ. ಇತಿಹಾಸ ಸಂಶೋಧಕ, ಕವಿ ಅನಾರೋಗ್ಯ ಪೀಡಿತಳಾದ ಪತ್ನಿಯನ್ನು ಬಿಟ್ಟು ಗಾಂಧೀ ಆಶ್ರಮದಲ್ಲಿ ಕುಳಿತು ದೇಶಸೇವೆ, ಸತ್ಯಾಗ್ರಹದಲ್ಲಿ ಸಕ್ರಿಯವಾಗಿ ಭಾಗಿಯಾಗಿದ್ದರು. ತನ್ನ ಸಂಸಾರದ ಕಷ್ಟ, ದುಃಖವನ್ನು ಯಾರಿಗೂ ಹೇಳದೆ, ಮೌನವಾಗಿ ಸಹಿಸಿಕೊಂಡು ಬಂದಿರುವ ಗೋವಿಂದರ ವ್ಯಕ್ತಿತ್ವ, ಮಿತ್ತಬೈಲ್ ಗುತ್ತಿನಲ್ಲಿ ಮಾಂಕರಾಲರ ಯಜಮಾನಿಕೆ, ಮನೆಯವರ ಸ್ಥಿತಿ, ಸಂಪತ್ತಿನ ನಾಶ ಇವೆಲ್ಲವೂ ಆಗುತ್ತಿರುವಾಗಲೂ ಗುತ್ತಿನ ಅಧಿಕಾರಕ್ಕಾಗಿ ಆಸೆ ಪಡದ ಸುಬ್ಬಯಣ್ಣ. ಈ ಎರಡೂ ಪಾತ್ರಗಳು ವಿಶಿಷ್ಟವೆನಿಸುವಂತಿದೆ. ಗುತ್ತಿನ ಅಧಿಕಾರದ ದರ್ಪ, ಕ್ರೌರ್ಯಗಳಿಗೆ ಸುಬ್ಬಯಣ್ಣನ ಪಾತ್ರವು ಭಿನ್ನವಾಗಿ ಮೂಡಿ ಬಂದಿದೆ. ಅಹಿಂಸಾತ್ಮಕ ಹೋರಾಟ, ಸಮಾನತೆಯ ಚಿಂತನೆ ಇವು ಆ ಕಾಲದ ಬದಲಾವಣೆಯ ಸಂಕೇತ. ಮಾನಸಿಕವಾಗಿ ಮೂಲ ಸಂಸ್ಕೃತಿಯನ್ನು ವಿರೋಧಿಸಬಲ್ಲವರು ಹಾಗೂ ಆ ಪದ್ಧತಿಗೆ ಒಪ್ಪಿಕೊಂಡವರ ಮುಖಾಮುಖಿಯ ಸಂದರ್ಭಗಳು ದೇಶದ ಚಿತ್ರಣವನ್ನು ಕಾದಂಬರಿಯಲ್ಲಿ ಗಾಂಧಿಯ ಕೊಲೆಯ ಮೂಲಕ ತಿಳಿಸಿದ್ದಾರೆ. ಜಾತಿ, ಧರ್ಮಗಳ ಹೆಸರಿನ ಮಾರಣಹೋಮ, ಭೀಕರ ಹತ್ಯಾಕಾಂಡಗಳೂ, ರಕ್ತದೋಕುಳಿಗಳು ವ್ಯಕ್ತಗೊಂಡಂತೆ ಗುತ್ತಿನಲ್ಲಿ ಅಧಿಕಾರಕ್ಕಾಗಿ ಸ್ಪರ್ಧೆ, ಸಂಪತ್ತಿನ ಸಂಗ್ರಹ, ಮೋಸ, ಅಧಿಕಾರದ ದಾಹ, ಹಾಗೂ ಕೊಲೆಯು ನಡೆಯುತ್ತದೆ. ದೇಶದ ಚಿತ್ರಣದ ಜೊತೆಗೆ ಮಿತ್ತಬೈಲಿನ ಚಿತ್ರಣವೂ ಏಕಪ್ರಕಾರವಾಗಿ ಕಾಣಿಸುತ್ತದೆ. 'ಗುತ್ತು' ಒಂದು ಸಮಷ್ಟಿಯ ಸಂಕೇತದಂತೆ ಕಾದಂಬರಿಯಲ್ಲಿ ವ್ಯಕ್ತಗೊಳ್ಳುವುದರ ಮೂಲಕ ಸಂಸ್ಕೃತಿಯ ಆಳವನ್ನು ಪರಿಚಯಿಸುತ್ತದೆ.

ಬ್ರಿಟಿಷರ ವಿರುದ್ಧದ ಹೋರಾಟವು ಕಾದಂಬರಿಯಲ್ಲಿ ವಿಭಿನ್ನ ರೀತಿಯಲ್ಲಿ ವ್ಯಕ್ತಗೊಳ್ಳುತ್ತದೆ. ಟಿಪ್ಪುಸುಲ್ತಾನನ ಸೈನಿಕರು ಬ್ರಿಟಿಷರ ವಿರುದ್ಧ ಮಾಡಿದ ಹೋರಾಟದ ಭಾಗವಾಗಿ ಮಾಡಿದ ಅನ್ಯಾಯವು

ಬೆರಗನ್ನು ಹುಟ್ಟಿಸುತ್ತದೆ. ಮಡಿಕೇರಿಯ ಕಲ್ಯಾಣಪ್ಪ ಬ್ರಿಟಿಷರ ತೀವ್ರ ವಿರೋಧಿ. ಅವನ ಹೋರಾಟಗಳೆಲ್ಲವೂ ಬ್ರಿಟಿಷರ ಖಜಾನೆ ಲೂಟಿ ಮಾಡುವುದು, ಬ್ರಿಟಿಷ್ ಸೈನ್ಯವನ್ನು ಹೊರದಬ್ಬುವುದು. ಅವನ ಈ ಕೆಲಸದಲ್ಲಿ ಅದೇ ಉದ್ದೇಶವನ್ನಿಟ್ಟುಕೊಂಡು ಅವನಿಗೆ ಸಹಾಯಕನಾಗಿ ಬಂದವ ಬಾರೆಬೈಲ್‌ಗುತ್ತಿನ ಬೀರಣ್ಣ ಬಂಟ. ಇವನ ಉದ್ದೇಶ ನೆಪಮಾತ್ರಕ್ಕೆ ಬ್ರಿಟಿಷರ ವಿರುದ್ಧದ ಹೋರಾಟ, ಆದರೆ ಇವನು ಮಾಡಿರುವುದೆಲ್ಲವೂ ಬರೀ ಲೂಟಿ, ಅತ್ಯಾಚಾರ, ಅನಾಚಾರಗಳು ಮನೆಗಳನ್ನು ಲೂಟಿ ಮಾಡುತ್ತಾ ಮನೆಗೆ ಕೊಳ್ಳಿ ಇಡುತ್ತಾ ಅವರನ್ನು ಓಡಿಸುತ್ತಾ, ಓಡದ ಮಕ್ಕಳು, ಮುದುಕರನ್ನು ಕೊಚ್ಚಿಹಾಕುತ್ತಾ, ಹೆಣ್ಣು ಮಕ್ಕಳನ್ನು ಅತ್ಯಾಚಾರ ಮಾಡಿ ಮಾನ ಮುಚ್ಚಲು ಬಟ್ಟೆಯನ್ನು ಕೂಡಾ ಕೊಡದೆ ಇದ್ದಂತಹ ದುಷ್ಟವ್ಯಕ್ತಿ. ಇಂತಹ ದುಷ್ಟ ಕೆಲಸವನ್ನು ಮಾಡುತ್ತಿದ್ದ ಬೀರಣ್ಣ ಬಂಟ 'ಗುತ್ತು' ಸಂಸ್ಕೃತಿಗೆ ಒಂದು ಕಳಂಕ. ಜನರ ರಕ್ಷಣೆಯನ್ನು ಮಾಡಬೇಕಾದ ರೀತಿ–ನೀತಿಯನ್ನು ಅನುಸರಿಸಬೇಕಾದ ಆ ಸಂಸ್ಕೃತಿಯ ಕರಾಳಮುಖವು ವ್ಯಕ್ತಗೊಳ್ಳುತ್ತದೆ. ಸ್ವಾತಂತ್ರ್ಯ ಹೋರಾಟದ ಹೆಸರಿನ ಮೂಲಕ ಜನರ ಸರ್ವನಾಶ ಮಾಡಲು ಹೊರಟಿರುವ ವ್ಯಕ್ತಿಯಾಗಿದ್ದಾನೆ. ಕಲ್ಯಾಣಪ್ಪನ ಹೋರಾಟವು ನಿಜವಾಗಿ ಬ್ರಿಟಿಷ್ ವಿರೋಧಿಯೇ ಆಗಿತ್ತು. ಆದರೆ ಸಹಾಯಕ್ಕಾಗಿ ಸೇರಿದ ಬೀರಣ್ಣ ಬಂಟನ ಕಾರ್ಯವು ಸ್ವಾರ್ಥದ್ದಾಗಿದೆ. ಬೀರಣ್ಣ ಬಂಟನ ಪಾತ್ರವನ್ನು ಪ್ರತ್ಯೇಕವಾಗಿ ಗಮನಿಸಿದಾಗ ಗುತ್ತಿನ ಆಡಳಿತ, ಅಲ್ಲಿಯ ಸಂಪ್ರದಾಯ, ಆಚಾರ, ವಿಚಾರಗಳೆಲ್ಲ ಭಿನ್ನವಾಗಿ ಕಾಣಿಸಿಕೊಳ್ಳುತ್ತದೆ. ಗುತ್ತು ಸಂಸ್ಕೃತಿಯಲ್ಲಿ ಈ ರೀತಿಯ ವ್ಯಕ್ತಿಗಳು ಇದ್ದಾರೆ ಎನ್ನುವ ವಿವರವನ್ನು ಕಾದಂಬರಿಕಾರರು ವ್ಯಕ್ತಪಡಿಸಿದ್ದಾರೆ.

ಕಾದಂಬರಿಯ ಮುಖ್ಯಪಾತ್ರ 'ಯಮುನಕ್ಕ' ಕೂಡಾ ಗುತ್ತು ಸಂಸ್ಕೃತಿಯ ರಕ್ಷಣೆಗಾಗಿ ಜೀವತೆತ್ತವಳು. ಭ್ರಷ್ಟ ವ್ಯವಸ್ಥೆಯ ವಿರುದ್ಧ ಹೋರಾಟ ಮಾಡುವುದು ಅನಿವಾರ್ಯ ಎನ್ನುವ ಭಾವನೆಯುಳ್ಳವಳು. ಇದರ ಪರಿಣಾಮವಾಗಿ ಮಾಂಕರಾಲರ ಸಂಸ್ಕೃತಿಯ ವಿರುದ್ಧ ನಡೆಯುವ ಸಂಘರ್ಷದಲ್ಲಿ ಪ್ರತ್ಯಕ್ಷವಾಗಿ ಯಮುನಕ್ಕ ಕಾಣಿಸಿಕೊಳ್ಳುತ್ತಾಳೆ. ತಾಯಿ ಹೃದಯದ ಹೆಣ್ಣು ಈ ರೀತಿ ಮಾಡಿಸಬಹುದಾ? ಎಂದು ಪ್ರಶ್ನಿಸಿಕೊಂಡರೆ, ಬಾರೆಬೈಲಿನ ಘಟನೆಯ ಸೂತ್ರಧಾರ ಯಮುನಕ್ಕ. ಅವಳ ಪರಾಕ್ರಮಕ್ಕೆ ಸಾಕ್ಷಿಯಾಗಿ ಮಿತ್ತಬೈಲ್ ಮತ್ತೆ ಅಭಿವೃದ್ಧಿಯನ್ನು ಹೊಂದುತ್ತದೆ. ಅಂಕ, ಆಯನ, ಜಾತ್ರೆಗಳು ಕ್ರಮಪ್ರಕಾರವಾಗಿ ನಡೆಯುತ್ತವೆ. ಅಜೀರ್ಣಗೊಂಡ ಗುತ್ತಿನ ಮನೆಯನ್ನು ವ್ಯವಸ್ಥಿತ ರೂಪಕ್ಕೆ ತರುವಲ್ಲಿ ವಹಿಸಿರುವ ಶ್ರಮ ಅನುಕರಣೀಯ. ತಾಳ್ಮೆಗೂ ಒಂದು ಮಿತಿಯೆನ್ನುವುದು ಇದೆ ಎನ್ನುವುದು ಯಮುನಕ್ಕನಿಂದ ವ್ಯಕ್ತಗೊಳ್ಳುತ್ತದೆ. ಗುತ್ತು ಸಂಸ್ಕೃತಿಯ ಉಳಿವಿಗಾಗಿ, ಯಾವ ತ್ಯಾಗಕ್ಕೂ ಸಿದ್ಧಳಾಗಿ ನಿಂತ

ವ್ಯಕ್ತಿಯಾಗಿ ಯಮುನಕ್ಕನ ಪಾತ್ರವಿದೆ. ಯೋಗ್ಯವ್ಯಕ್ತಿಗೆ ಅಧಿಕಾರವನ್ನು ನೀಡುವುದಕ್ಕಾಗಿ ಅವಳ ಸಂಘರ್ಷ, ಅಲ್ಲಿ ಸ್ವಾರ್ಥದ ಅಂಶಗಳಿಲ್ಲ.

'ಗುತ್ತು' ವಿಶಾಲವಾದ ಭೂಮಿಯ ಮಾಲಿಕತ್ವವನ್ನು ಪಡೆದಿತ್ತು. ಆ ಭೂಮಿಯನ್ನು ಗೇಣಿದಾರರಿಗೆ ವರ್ಷಕ್ಕೆ ಇಂತಿಷ್ಟು ಎಂದೂ ಮುಡಿಯ ಲೆಕ್ಕಾಚಾರದಲ್ಲಿ ಗೇಣಿಗೆ ನೀಡುತ್ತಿದ್ದರು. ತಮ್ಮ ಭೂಮಿಯಲ್ಲಿ ಇರುವ ಗೇಣಿದಾರರನ್ನು 'ಒಕ್ಕೆಲ್' ಎಂದು ಕರೆಯುತ್ತಿದ್ದರು. ವಿಷು ಹಬ್ಬಕ್ಕೆ ಇವರು ಹೊಸ ಗೇಣಿ ಚೀಟಿ ಮಾಡುವುದು ರೂಢಿ. ನಿಗದಿಪಡಿಸಿದ ಗೇಣಿಯನ್ನು ಕೊಡಲೇಬೇಕು. ಕೊಡದಿದ್ದರೆ ಅವರನ್ನು ಒಕ್ಕಲೆಬ್ಬಿಸುವ ಕ್ರಮವೂ ಇತ್ತು. ಆದ್ದರಿಂದ ಒಕ್ಕಲಿನವರು ಸಾಲ ಮಾಡಿಯಾದರೂ ಗೇಣಿಯನ್ನು ಕೊಡುತ್ತಿದ್ದರು. ಕೆಲವು ಸಂದರ್ಭಗಳಲ್ಲಿ ಗೇಣಿಯೂ ಕೊಡದೆ ಒಕ್ಕಲೂ ಏಳದೆ ತೊಂದರೆ ಕೊಟ್ಟವರೂ ಇದ್ದಾರೆ. ಆದರೆ ಗುತ್ತಿನವರ ಹಣಬಲ, ಭುಜಬಲ, ಅಧಿಕಾರಬಲದಿಂದ ಗೇಣಿಯನ್ನಾಗಲಿ ಅಥವಾ ಭೂಮಿಯನ್ನಾಗಲಿ ಮರಳಿಪಡೆಯುವಲ್ಲಿ ಯಶಸ್ವಿಯಾಗುತ್ತಿದ್ದರು. ಪಡೆದ ಗೇಣಿಯಲ್ಲಿ ಇವರು ರಾಜರಿಗೆ ಸ್ವಲ್ಪ ಪ್ರಮಾಣದ ಗೇಣಿಯನ್ನು ಸಲ್ಲಿಸಿ ಉಳಿದುದನ್ನು ತಮ್ಮ ಬಳಿಯಲ್ಲಿಯೇ ಇಟ್ಟುಕೊಂಡು ಆರ್ಥಿಕವಾಗಿ ಸಮರ್ಥರಾದರು. ಇದೇ ರೀತಿಯಲ್ಲಿ ಊರಿನ ಶಾನುಭೋಗರೂ ಕೂಡ ಹೆಚ್ಚು ಹೆಚ್ಚು ಭೂಮಿಯನ್ನು ಪಡೆಯುತ್ತಿದ್ದರು. ಶಾನುಭೋಗರು ತೀರ್ವೆ, ಕಂದಾಯ ವಸೂಲು ಮಾಡುತ್ತಿದ್ದರು. ಕಂದಾಯ ಕೊಡಲು ಬಾಕಿಯಿದ್ದವರ ಭೂಮಿಯನ್ನು ತನ್ನ ಹೆಸರಿಗೆ ಬರೆಸಿ ತೀರ್ವೆ ಕಟ್ಟಿ ಭೂಮಿ ಒಳಗೆ ಹಾಕುತ್ತಿದ್ದರು. ಕಾದಂಬರಿಯಲ್ಲಿ ಬಾರೆಬೈಲಿನ ಗೇಣಿದಾರನಾಗಿರುವ ತ್ಯಾಂಪಣ್ಣ ಅಹಂಕಾರಿ. ಎರಡೆರಡು ವರ್ಷಗಳ ಗೇಣಿ ಕೂಡ ಬಾಕಿ ಇದೆ. ಆದ್ದರಿಂದ ಅವನಿಂದ ಭೂಮಿಯನ್ನು ಬಿಡಿಸಿ ಬೇರೆ ಯಾರಿಗಾದರೂ ಕೊಡೋಣವೆಂದರೆ, ತ್ಯಾಂಪಣ್ಣನ ಭಯದಿಂದ ಮುಳ್ಳುಪೊದರಿಗೆ ಕೈಹಾಕಲು ಯಾರು ತಯಾರಿರಲಿಲ್ಲ. ಗೇಣಿಗೆ ಹೆಣದವರನ್ನು ಗದರಿಸಿ ಕಳುಹಿಸುತ್ತಿದ್ದ. ಈ ರೀತಿಯ ಗೇಣಿದಾರರು ಕೂಡ ಇರುತ್ತಾರೆ. ಇಂತಹವರಿಂದ ಗೇಣಿ ವಸೂಲು ಮಾಡಲು ತುಂಬಾ ಕಷ್ಟವಿದೆ. ಆದ್ದರಿಂದ ಗೇಣಿಯನ್ನು ಪಡೆಯಲು ಅಷ್ಟೇ ಪರಾಕ್ರಮ ಬೇಕು. ಅಲ್ಲಿ ದಯೆ, ಕನಿಕರ, ದಾಕ್ಷಿಣ್ಯವನ್ನು ತೋರಿಸಿದರೆ ಗೇಣಿಯ ಸಿಗಲಾರದು. ಆದರೆ ಗುತ್ತಿನವರಲ್ಲಿ ಮೂರು ಬಲಗಳು ಇರುವ ಕಾರಣದಿಂದಾಗಿ ಗೇಣಿಯನ್ನು ವಸೂಲು ಮಾಡುವಲ್ಲಿ ಯಶಸ್ವಿಯಾಗುತ್ತಿದ್ದರು. ಗೇಣಿಯ ಗುತ್ತಿನ ಆರ್ಥಿಕ ಉತ್ಪತ್ತಿಯ ಮೂಲ. ಆದ್ದರಿಂದ ಗೇಣಿಯನ್ನು ಪಡೆಯದೆ ಬಿಡುತ್ತಿರಲಿಲ್ಲ.

ಗುತ್ತಿನ ಮನೆಯ ಶ್ರೀಮಂತಿಗೆ ಅನುಗುಣವಾಗಿ ಅವರಿಗೆ ಪ್ರಯಾಣ ಮಾಡಲು ದಂಡಿಗೆ (ಪಲ್ಲಕ್ಕಿ) ಯನ್ನೂ ಉಪಯೋಗಿಸುತ್ತಿದ್ದರು. ಆ ಕಾಲದಲ್ಲಿ ದಂಡಿಗೆಯನ್ನು ಉಪಯೋಗಿಸುವುದು ಬಹಳ ದೊಡ್ಡ ಗೌರವದ ಸಂಕೇತ. ಇದು ಮನೆತನದ ಪ್ರಸಿದ್ಧಿ, ಶ್ರೀಮಂತಿಕೆ, ಅಧಿಕಾರವನ್ನು ವ್ಯಕ್ತಪಡಿಸುತ್ತದೆ. ಕುದುರೆಯ ಜಟಕಾಬಂಡಿ ಸಾಮಾನ್ಯವಾಗಿ ಗುತ್ತಿನವರ ಪ್ರಯಾಣಕ್ಕೆ ಇರುತ್ತಿತ್ತು. ಆದರೆ ದಂಡಿಗೆಯ ಮೂಲಕ ಪ್ರಯಾಣ ಮಾಡುವುದು ರಾಜಮನೆತನದವರು ಮಾತ್ರ, ಯಮುನಕ್ಕನು ದಂಡಿಗೆಯಲ್ಲಿ ಪ್ರಯಾಣ ಮಾಡುವುದರ ಮೂಲಕ ರಾಜವೈಭವವನ್ನು ಗುತ್ತು ಕೂಡ ಪಡೆದಿತ್ತು ಎಂದೆನಿಸುತ್ತದೆ.

ರಾಜಕೀಯವಾಗಿ ಗುತ್ತು ಬಹಳಷ್ಟು ಹೆಸರನ್ನು ಗಳಿಸಿತ್ತು. ಅದರ ಪರಿಣಾಮವಾಗಿ ಈಗಲೂ ಅಧಿಕಾರವನ್ನು ನಡೆಸುವ ಭಾಗಗಳಲ್ಲಿ ಗುತ್ತಿನ ಹಿನ್ನೆಲೆಯುಳ್ಳವನು ಹೆಚ್ಚಾಗಿ ಕಾಣಸಿಗುತ್ತಾನೆ. ಆಡಳಿತ ಮಾಡುವ ಗುಣ ರಕ್ತಗತವಾಗಿ ಬಂದಿರುತ್ತದೆ. ಮನುಷ್ಯ ಜೀವನದ ಸಂಸ್ಕೃತಿಯ ಎಲ್ಲಾ ಭಾಗವನ್ನು 'ಗುತ್ತು' ಎನ್ನುವುದರ ಮೂಲಕ ಸೇರಿಸಿ ಗುತ್ತು ಸಂಸ್ಕೃತಿಯನ್ನು ಜಾಗತಿಕ ಮಟ್ಟಕ್ಕೆ ಕೊಂಡು ಹೋಗುವ ಕೆಲಸಗಳು ನಡೆದಿವೆ. ಸ್ವಾತಂತ್ರ್ಯಪೂರ್ವ ಮತ್ತು ಸ್ವಾತಂತ್ರ್ಯ ನಂತರವೂ ಗುತ್ತಿನ ಅಧಿಕಾರದಲ್ಲಿ ಬದಲಾವಣೆಯಾಗುವುದು ಕಾದಂಬರಿಯಲ್ಲಿ ವ್ಯಕ್ತಗೊಳ್ಳುವುದಿಲ್ಲ. ಸಾಮಾಜಿಕ ಆಚಾರ, ವಿಚಾರಗಳು, ನಂಬಿಕೆಗಳು, ಜೀವನ ಪದ್ಧತಿಗಳು ಮಾತ್ರ ಬದಲಾವಣೆಯನ್ನು ಪಡೆಯುತ್ತದೆ. ತದನಂತರ ರೈತರ ಪರವಾಗಿ ಬಂದ ಕಾನೂನುಗಳ ಫಲವಾಗಿ ಭೂಮಿಯ ವಿಸ್ತಾರತೆಯಲ್ಲಿ ಅಧಿಕಾರದಲ್ಲಿ ಕಡಿಮೆಯಾಯಿತೆ ಹೊರತು, ಅದರ ಸ್ಥಾನಮಾನ, ಗೌರವ ಕಡಿಮೆಯಾಗಿಲ್ಲ. ಇಂದು ಕೂಡಾ ಗುತ್ತಿನ ಬಗೆಗೆ ಒಳ್ಳೆಯ ಅಭಿಪ್ರಾಯ ಸಮಾಜದ ಮೇಲಿದೆ. ಇದಕ್ಕೆ ಕಾರಣ ಗುತ್ತಿನ ಅಮೂಲ್ಯವಾದ ಸಂಸ್ಕೃತಿ. ಆರ್ಥಿಕವಾಗಿ ಬಲಿಷ್ಟರಾಗಿರುವ ಗುತ್ತು ಇಂದು ಕೂಡಾ ಹೆಚ್ಚಿನ ಕೃಷಿಭೂಮಿಯನ್ನು ಹೊಂದಿದ್ದು ಉನ್ನತ ಮಟ್ಟದ ಜೀವನವನ್ನು ಮಾಡುತ್ತಿದೆ.

### ೪.೪: ಸ್ವಾತಂತ್ರ್ಯ ಸಂಗ್ರಾಮದಲ್ಲಿ ಗುತ್ತಿನ ಪಾತ್ರ

ಗುತ್ತಿನ ಅಧಿಕಾರಕ್ಕಾಗಿ ಯಾವ ರೀತಿಯ ಹೋರಾಟ ನಡೆಯುತ್ತದೆಯೋ ಅದೇ ರೀತಿಯಲ್ಲಿ ದೇಶದಲ್ಲಿ ಬಾಹ್ಯಶಕ್ತಿಗಳ ವಿರುದ್ಧದ ಹೋರಾಟವು ನಡೆಯುತ್ತದೆ. ಇವುಗಳ ಮಧ್ಯೆ ಅಧಿಕಾರ ಸಂಪತ್ತಿಗಾಗಿ ಆಕ್ರಮಣ ಮಾಡುವ ದೇಶಿ ದೊರೆಗಳು ಕಾಣಸಿಗುತ್ತಾರೆ. ಇಲ್ಲಿ ಸ್ವಾತಂತ್ರ್ಯಕ್ಕಾಗಿ ನಡೆಯುವ

ಹೋರಾಟವು ಇದೆ ಹಾಗೂ ತಮ್ಮ ಸಂಪತ್ತನ್ನು ಹೆಚ್ಚಿಸಿಕೊಳ್ಳಲು ಹೆಣ್ಣುಮಕ್ಕಳನ್ನು ಬಲತ್ಕಾರ ಮಾಡಲು ನಡೆಸುವ ಸ್ವಾರ್ಥದ ಹೋರಾಟವು ಇದೆ.

ಗೋವಾದಿಂದ ಪೋರ್ಚುಗೀಸರ ಕಿರುಕುಳ ತಡೆಯಲು ಸಾಧ್ಯವಾಗದೆ ಓಡಿಬಂದ ಕೊಂಕಣಿಗಳು ಮಂಜೇಶ್ವರದಲ್ಲಿ ಶ್ರೀಮದನಂತೇಶ್ವರ ದೇವಸ್ಥಾನವನ್ನು ಕಟ್ಟಿಸುತ್ತಾರೆ. ಈ ದೇವಸ್ಥಾನ ಗೋವಾದಿಂದ ಕೊಚ್ಚಿಯವರೆಗಿನ ಗೌಡಸಾರಸ್ವತರಿಗೆ ಬಹಳ ಪ್ರಾಮುಖ್ಯವಾದ ದೇವಸ್ಥಾನವಾಗಿತ್ತು. ಷಷ್ಠಿಯ ಜಾತ್ರೆಯ ಸಂದರ್ಭದಲ್ಲಿ ದೂರದೂರಿನಿಂದ ಭಕ್ತರು ಬಂದು ಕೈಮುಗಿಯುತ್ತಿದ್ದರು. ಈ ರೀತಿ ಭಕ್ತ ಸೇರುವಿಕೆಯ ಪರಿಣಾಮವಾಗಿ ದೇವಸ್ಥಾನ ಶ್ರೀಮಂತವಾಯಿತು. ಇದರ ಪರಿಣಾಮವಾಗಿ ದೇವಸ್ಥಾನಕ್ಕೆ ಹಲವು ಮಂದಿ ಹಲವು ಸಲ ಧಾಳಿ ಮಾಡಿದರು. ವಿಟ್ಲದ ಡೊಂಬ ಹೆಗ್ಡೆ, ಟಿಪ್ಪುವಿನ ಸುಬೇದಾರ ಹೀಗೆ ಹಲವಾರು ಜನ ಧಾಳಿ ಮಾಡಿ ಸಂಪತ್ತನ್ನು ಲೂಟಿಮಾಡಿದರು, ದೇವಸ್ಥಾನವನ್ನು ಹಾಳುಗೆಡವಿದರು. ವಿಟ್ಲದ ದೊಂಬ ಹೆಗ್ಡೆ ದೇವಸ್ಥಾನವನ್ನು ಲೂಟಿಮಾಡಿ ಹಣ ಚಿನ್ನ ಸಿಗಲಿಲ್ಲವೆಂದು ಆ ಕಾಲದಲ್ಲಿ ದೇವಸ್ಥಾನದ ಮೊಕ್ತೇಸರರಾಗಿದ್ದ ನರಸಯ ಭಂಡಾರಿಯನ್ನು ನೆಲಮಾಳಿಗೆಯಲ್ಲಿಟ್ಟು ಚಿತ್ರಹಿಂಸೆ ಕೊಟ್ಟರು. ನರಸಯ ಭಂಡಾರಿಗಳು ಹುಚ್ಚು ಹಿಡಿದು ಸಾಯುವಂತಾಯಿತು, ಆದರೂ ದೇವಸ್ಥಾನದ ಸಂಪತ್ತು ಎಲ್ಲಿದೆ ಎಂದು ಬಾಯಿ ಬಿಡಲಿಲ್ಲ. ಈ ರೀತಿಯಲ್ಲಿ ಯಾವ ತ್ಯಾಗಕ್ಕೂ ಸಿದ್ಧರಾಗಿದ್ದ ಕೊಂಕಣಿಗಳಿಗೆ ಮಿತ್ತಬೈಲಿನ ಮಂಜಣಾಳ್ವ ಸೈನ್ಯದ ದಂಡನಾಯಕನಾದ ಸಂದರ್ಭದಲ್ಲಿ ರಕ್ಷಣೆ ದೊರೆಯಿತು. ದಂಡನಾಯಕನಾಗಿದ್ದುಕೊಂಡು ಪ್ರಜೆಗಳ ರಕ್ಷಣೆಯನ್ನು ಮಾಡಬೇಕಾದುದರ ಜೊತೆಗೆ ಆರಾಧನಾ ಕೇಂದ್ರಗಳ ರಕ್ಷಣೆಯನ್ನು ಮಾಡಬೇಕಾದುದು ತನ್ನ ಕರ್ತವ್ಯವೆಂದು ಭಾವಿಸಿ ಮಂಜಣಾಳ್ವ ಶ್ರಮಪಟ್ಟಿದ್ದಾನೆ. ಇದು ಗುತ್ತು ಸಂಸ್ಕೃತಿಯ ವೀರತ್ವದ ಗುಣ. ತಮಗೆ ದೊರೆತಿರುವ ಕರ್ತವ್ಯಕ್ಕೆ ಕಳಂಕ ಬಾರದಂತೆ ಗುತ್ತು ತನ್ನ ತತ್ವಸಿದ್ಧಾಂತಗಳನ್ನು ಪಾಲಿಸಿಕೊಂಡಿದೆ. ಅಲ್ಲಿ ತ್ಯಾಗಕ್ಕೂ ಸಿದ್ಧರಾಗಿರುವ ಅವರ ಗುಣ ವ್ಯಕ್ತಗೊಳ್ಳುತ್ತದೆ.

ದುರ್ಬಲರಿಗೆ ರಕ್ಷಣೆಯನ್ನು ಒದಗಿಸುವುದು ಗುತ್ತಿನ ಬಹುಮುಖ್ಯ ಕರ್ತವ್ಯ. ಇದನ್ನು ಅವರು ಬಹಳ ಸಂತೋಷದಿಂದಲೇ ಸ್ವೀಕರಿಸಿಕೊಳ್ಳುತ್ತಾರೆ. ಇದು ಎಂತಹ ಕಷ್ಟದ ಪ್ರಶ್ನೆಯೇ ಆಗಿರಲಿ ಅದಕ್ಕೆ ಭಯಪಟ್ಟುಕೊಂಡು ತಟಸ್ಥರಾಗಿಬಿಡುವುದು ಗುತ್ತಿನ ಸಂಸ್ಕೃತಿಯಲ್ಲ. ತಾವು ಮಾಡಬೇಕಾದ ಕರ್ತವ್ಯವನ್ನು ನಿಷ್ಠೆಯಿಂದ ಸ್ವಲ್ಪವೂ ಕಳಂಕಬಾರದಂತೆ ಮಾಡುತ್ತಿದ್ದರು. ಸ್ವಾತಂತ್ರ್ಯ ಹೋರಾಟದ

ಹೆಸರಿನಲ್ಲಿ ಟಿಪ್ಪು ಸುಲ್ತಾನನ ಸೈನಿಕರು ಮಾಡಿದ ಅನ್ಯಾಯವು ಅಮಾನವೀಯವಾದುದು. ಮಂಜಣಾಳ್ವನ ಊರಾದ ಮಿತ್ತಬೈಲಿಗೆ ಸಮೀಪದ ಮಂಜೇಶ್ವರದಲ್ಲಿ ಟಿಪ್ಪುವಿನ ಸೈನ್ಯ ಮಾಡಿದ ಅನ್ಯಾಯಕ್ಕೆ ಲೆಕ್ಕವಿಲ್ಲ.

"ಮಂಜೇಶ್ವರದ ಸುಬೇದಾರ, ಮೊಗವೀರರ ನೂರಕ್ಕೂ ಹೆಚ್ಚು ಕುಟುಂಬಗಳನ್ನು ಬಲತ್ಕಾರದಿಂದ ಇಸ್ಲಾಂ ಧರ್ಮಕ್ಕೆ ಸೇರಿಸಿದ. ಅವರಿಗೆ ಹಣ, ದೋಣಿ, ಮೀನು ಹಿಡಿಯುವ ಹಕ್ಕಿನ ಆಸೆ ತೋರಿಸಿ, ಪುಸಲಾಯಿಸಿ ಇಸ್ಲಾಮಿಗೆ ಸೇರಿಸಿ 'ಪುಸಲ'ರೆಂಬ ಬೇರೆಯೇ ಒಂದು ಪಂಗಡ ಸೃಷ್ಟಿಮಾಡಿಬಿಟ್ಟ. ಬ್ರಾಹ್ಮಣರ ಜನಿವಾರ ಕಿತ್ತುಹಾಕಿ, ಅವರ ಬಾಯಿಗೆ ಬಲವಂತದಿಂದ ದನದ ಮಾಂಸ ತುರುಕಿ ಜಾತಿ ಕೆಡಿಸಿದ! ದೇವಸ್ಥಾನದ ಸುತ್ತಮುತ್ತಲ ಮನೆಗಳಿಂದ ಹರೆಯದ ಹೆಣ್ಣುಮಕ್ಕಳನ್ನು ಶ್ರೀರಂಗಪಟ್ಟಣದ ಜನಾನಾಕ್ಕೆ ಸೇರಿಸಲು ಕಳುಹಿಸಿದನಂತೆ."[೧] ಈ ರೀತಿಯ ಭಯ ಜನರಲ್ಲಿ ಅಂದು ಕೂಡಿತ್ತು. ಅಸಮರ್ಥರಾಗಿದ್ದ ಅಮಾಯಕರನ್ನು ಈ ರೀತಿಯಲ್ಲಿ ಸುಲಭವಾಗಿ ಮತಾಂತರ ಮಾಡುವ ರೀತಿಯನ್ನು ಜನ ಗುತ್ತಿನವರಲ್ಲಿ ಹೇಳಿ ಅವರಿಂದ ರಕ್ಷಣೆಯನ್ನು ಪಡೆಯುತ್ತಿದ್ದರು. ಸೈನ್ಯದ ದಂಡನಾಯಕತ್ವವನ್ನು ವಹಿಸಿಕೊಂಡಿರುವ ಗುತ್ತು ಈ ರೀತಿಯ ಅನಾಚಾರವನ್ನು ಸಹಿಸಿಕೊಳ್ಳಲು ಸಾಧ್ಯವಿಲ್ಲ. ಆದ್ದರಿಂದ ಅಂತಹ ಕೃತ್ಯಗಳ ವಿರುದ್ಧ ಗುತ್ತು ಪ್ರತಿಭಟಿಸುತ್ತದೆ. ರಾಜಕೀಯವಾಗಿ ತಮಗಿರುವ ಅಧಿಕಾರವನ್ನು ಇಲ್ಲಿ ಪ್ರಯೋಗಿಸಿಬಿಡುತ್ತದೆ. ಮಂಜಣಾಳ್ವನು ತಮ್ಮನ್ನು ನಂಬಿರುವ ಜನರ ರಕ್ಷಣೆಗೆ ನಿಂತುಕೊಳ್ಳುತ್ತಾನೆ. ಅವರ ಮನೆ, ಸಂಸಾರ, ಸಂಪತ್ತಿನ ರಕ್ಷಣೆಗಾಗಿ ಬೇಕಾದ ವ್ಯವಸ್ಥೆಯನ್ನು ಮಾಡುತ್ತಾನೆ. ಇದು ಗುತ್ತು ಸಂಸ್ಕೃತಿಯ ಬಹಳ ಉದಾರ ಗುಣ. ಕೇವಲ ಅಧಿಕಾರವನ್ನು ಪಡೆದು ಜನರನ್ನು ಗುಲಾಮರಂತೆ ದುಡಿಸುವುದು ಮಾತ್ರ ಗುತ್ತಿನ ಸಂಸ್ಕೃತಿಯೆಂದು ಭಾವಿಸಿಕೊಂಡವರು ಈ ರೀತಿಯ ತ್ಯಾಗಮನೋಭಾವವನ್ನು ನೋಡಿ ಆಶ್ಚರ್ಯಪಟ್ಟುಕೊಳ್ಳುವುದರಲ್ಲಿ ಸಂಶಯವಿಲ್ಲ.



ಮಡಿಕೇರಿಯ ಕಲ್ಯಾಣಪ್ಪನು ಬ್ರಿಟಿಷರ ವಿರುದ್ಧ ಹೋರಾಡುವುದಾದರೂ ಸ್ಥಳೀಯ ಶ್ರೀಮಂತರ ಮನೆಯನ್ನು, ಭಂಡಸಾಲೆಯನ್ನು ಲೂಟಿಮಾಡಿ ಜನರ ಪಾಲಿಗೆ ದುಷ್ಟನಾಗಿದ್ದನು. ಅವನ ಉದ್ದೇಶ ಒಳ್ಳೆಯದೆ ಆದರೂ ಸ್ಥಳೀಯರ ಕೋಪಕ್ಕೆ ತುತ್ತಾಗಿ ಬಿಡುತ್ತಾನೆ. ಈ ರೀತಿಯ ಸಮಸ್ಯೆಗಳಿಗೂ ಪರಿಹಾರವನ್ನು ಗುತ್ತು ಸೂಚಿಸುತ್ತದೆ. ಕಲ್ಯಾಣಪ್ಪನು ಲೂಟಿ ಮಾಡಿದ ಸಂಪತ್ತನ್ನು ಸೈನಿಕರಿಗೆ ಹಂಚಿಬಿಡುತ್ತಾನೆ. ಈ ಕಾರಣದಿಂದಾಗಿ ಅವನ ಸೈನ್ಯವನ್ನು ಯುವಕರು ಸೇರಲು ತೊಡಗುತ್ತಾರೆ. ಅದಕ್ಕಾಗಿ

---

೧ ಮಹಮ್ಮದ್ ಕುಳಾಯಿ – ಮಿತ್ತಬೈಲ್ ಯಮುನಕ್ಕ – ಪು.ಸಂ. ೧೪೨

ಕಲ್ಯಾಣಪ್ಪನ ಸೇನೆಗೆ ಬೇಕಾದ ಹಣ ಚಿನ್ನವನ್ನು ಒಟ್ಟುಮಾಡಿ ಕೊಟ್ಟು ಅವನ ದಾಂಧಲೆಯನ್ನು ತಪ್ಪಿಸುತ್ತಿದ್ದರು.

ಕಲ್ಯಾಣಪ್ಪನ ಗುರಿ ಬ್ರಿಟಿಷರ ವಿರುದ್ಧವಾಗಿದ್ದುದರಿಂದ ಪರೋಕ್ಷವಾಗಿ ಊರಿನ ಶ್ರೀಮಂತ, ಗುತ್ತಿನ ಮನೆಯವರ ಪ್ರೋತ್ಸಾಹವು ಕೂಡ ದೊರೆಯುತ್ತಿತ್ತು. ದುಷ್ಟಶಕ್ತಿಗಳ ವಿರುದ್ಧ ಹೋರಾಡುವ ಕಾರಣದಿಂದಾಗಿ ಸಿಕ್ಕಿರುವ ಬೆಂಬಲವನ್ನು ಉಪಯೋಗಿಸಿ ಬ್ರಿಟಿಷ್ ಸೈನಿಕರನ್ನು ಸಾಯಿಸಿ, ಅವರ ಖಜಾನೆಯನ್ನು ದೋಚುತ್ತಾನೆ. ಇಲ್ಲಿ ಮುಖ್ಯವಾಗಿರುವುದೇನೆಂದರೆ ಕಲ್ಯಾಣಪ್ಪನ ಇಂತಹ ಕಾರ್ಯಕ್ಕೆ ಗುತ್ತು ಸಂಪೂರ್ಣ ಸಹಕಾರವನ್ನು ಕೊಡುತ್ತದೆ. ಅನ್ಯರು ಬಂದು ಇಲ್ಲಿ ಆಳ್ವಿಕೆ ಮಾಡುವುದು, ಜನರನ್ನು ಶೋಷಿಸುವುದು ಗುತ್ತು ಸಂಸ್ಕೃತಿಗೆ ಸರಿಕಂಡುಬರುವುದಿಲ್ಲ. ಸದಾ ಅನ್ಯಾಯದ ವಿರುದ್ಧ ಹೋರಾಟ ನಡೆಸುವ, ಜನರಿಗೆ ರಕ್ಷಣೆಯನ್ನು ಒದಗಿಸುವ ಗುತ್ತು ಬ್ರಿಟಿಷರ ವಿರೋಧವನ್ನು ಕಟ್ಟಿಕೊಂಡಿತು. ಗುತ್ತು ಸಂಸ್ಕೃತಿಯಲ್ಲಿ ಇನ್ನೊಬ್ಬರ ದಾಸ್ಯಕ್ಕೆ ಒಳಗಾಗುವುದು, ಅಡಿಯಾಳಾಗುವುದು ಇಷ್ಟವಿಲ್ಲ. ಸದಾ ತಲೆಎತ್ತಿ ಸ್ವತಂತ್ರ ಬದುಕನ್ನು ಕಾಣುವ ಉದ್ದೇಶವುಳ್ಳದ್ದು. ಆ ಕಾರಣದಿಂದಾಗಿ 'ಗುತ್ತು' ಎನ್ನುವುದು ಸೃಷ್ಟಿಯಾದಂದಿನಿಂದಲೇ ಅನ್ಯಾಯವನ್ನು ಪ್ರತಿಭಟಿಸುತ್ತಾ, ಎಲ್ಲರಿಗೂ ಬದುಕಲು ಅವಕಾಶವನ್ನು ಕಲ್ಪಿಸಿಕೊಟ್ಟಿದೆ. ಈ ಅಂಶಗಳು ಕಾದಂಬರಿಯ ಆರಂಭದಿಂದಲೇ ಕಾಣಿಸಿಕೊಂಡಿವೆ. 'ಗುತ್ತು' ತನ್ನನ್ನು ನಂಬಿದವರ ಕೈಬಿಡುವ ಕೆಲಸವನ್ನು ಮಾಡಿಲ್ಲ. ಆದರಿಂದ ಎಂತಹ ಸಮಸ್ಯೆಗಳೇ ಬರಲಿ ತಮ್ಮ ಹೆಸರಿಗೆ ಕಳಂಕವಾಗಬಾರದು ಎನ್ನುವ ಉದ್ದೇಶವನ್ನಿಟ್ಟುಕೊಂಡು ಸಮಾಜದ ದುರ್ಬಲರಿಗೆ, ಸಹಾಯವನ್ನು ಕೇಳಿ ಬಂದವರಿಗೆ, ತನ್ನ ಶಕ್ತಿಮೀರಿ ಸಹಕರಿಸಿದೆ. ಇದು ಗುತ್ತಿನ ಬಗೆಗೆ ಇಡೀ ಸಮಾಜವೇ ಅಭಿಮಾನಪಟ್ಟುಕೊಳ್ಳಬೇಕಾದ ವಿಷಯ. ಇಂತಹ ಗೌರವದ ಸ್ಥಾನಮಾನವನ್ನು ಪಡೆಯಲು ಮುಖ್ಯ ಕಾರಣ ಕೊಟ್ಟ ಮಾತಿನಂತೆ ನಡೆಯುವುದು. ಇದು ಗುತ್ತಿನ ಇತಿಹಾಸದಲ್ಲಿ ಸದಾ ಮುಂದುವರಿದುಕೊಂಡು ಬಂದಿದೆ.

ಅಧಿಕಾರವನ್ನು ಪಡೆಯುವುದು, ಗೌರವ, ಮನ್ನಣೆಗೆ ಪಾತ್ರರಾಗುವುದು, ಜನರ ಕಷ್ಟಸುಖದಲ್ಲಿ ಭಾಗಿಯಾಗುವುದು ಮಾತ್ರ ಗುತ್ತು ಸಂಸ್ಕೃತಿಯಲ್ಲ, ಇದೆಲ್ಲವನ್ನು ಮೀರಿ ನಿಂತಿರುವ ಸ್ವಾತಂತ್ರ್ಯದ ಕಲ್ಪನೆ ಕೂಡ ಅಲ್ಲಿದೆ. ಕಾಲಕ್ಕೆ ಹೊಂದಿಕೊಂಡಂತೆ ಬದಲಾವಣೆಯಾಗುವುದು ಇಲ್ಲಿಯ ವಿಶೇಷ. ಆರಂಭದಲ್ಲಿ ಜನರನ್ನು ದುಡಿಸಿ ತಾನು ಮೆರೆಯುವ ಉದ್ದೇಶವಿಟ್ಟುಕೊಂಡ ಗುತ್ತು ಕಾಲಮಾನಕ್ಕೆ ಅನುಗುಣವಾಗಿ ತನ್ನ

ತತ್ವಸಿದ್ಧಾಂತಗಳಲ್ಲಿ ಬದಲಾವಣೆಯನ್ನು ಮಾಡಿಕೊಳ್ಳುತ್ತದೆ. ಆ ಕಾರಣಗಳಿಂದಾಗಿ ಸ್ವಾತಂತ್ರ್ಯ ಸಂಗ್ರಾಮದಲ್ಲಿಯೂ ಗುತ್ತು ಭಾಗಿಯಾಗುತ್ತದೆ.

ಗುತ್ತು ಸ್ವಾತಂತ್ರ್ಯ ಸಂಗ್ರಾಮದಲ್ಲಿ ಭಾಗಿಯಾಗುವುದರ ಮೂಲಕ ತುಳುನಾಡೇ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಭಾಗಿಯಾದಂತೆ ಭಾಸವಾಗಿದೆ. ಗುತ್ತಿನ ವಾತಾವರಣ, ಅಧಿಕಾರ, ಗೌರವದ ಚಿತ್ರಣವೇ ಬೇರೆ, ಗಾಂಧಿ ಜೊತೆ ಸೇರಿ ಉಪ್ಪಿನ ಸತ್ಯಾಗ್ರಹ, ಜೈಲ್ ಭರೋ ಕಾರ್ಯಕ್ರಮ, ಹೀಗೆ ಗಾಂಧೀ ಕರೆಕೊಟ್ಟ ಸ್ವಾತಂತ್ರ್ಯ ಸಂಗ್ರಾಮದ ಎಲ್ಲಾ ಚಳುವಳಿಗಳಲ್ಲಿ ಭಾಗಿಯಾಗುವ ಚಿತ್ರಣವೇ ಬೇರೆ. "ಒಂದು ದಿನ ಮಂಗಳೂರಿನ ಮೂಡಬಿದ್ರೆಯ ಬಳಿ ಒಂದು ಸೇತುವೆಯನ್ನು ಸ್ವಾತಂತ್ರ್ಯಯೋಧರು ಸ್ಫೋಟಿಸಿದರಂತೆ. ಮದ್ರಾಸ್ ಸರಕಾರ ಈ ಆರೋಪವನ್ನು ಚಿಕ್ಕಪ್ಪ ರೈ ಹಾಗೂ ಯಮುನಕ್ಕನ ಮೇಲೆ ಹೊರಿಸಿ ಇಬ್ಬರನ್ನು ಜೈಲಿಗೆ ತಳ್ಳಿತು."[೧] ಸ್ವಾತಂತ್ರ್ಯ ಹೋರಾಟದಲ್ಲಿ ಸುಬ್ಬಯಣ್ಣ ಸಕ್ರಿಯವಾಗಿ ಭಾಗವಹಿಸಿದರೆ, ಯಮುನಕ್ಕನಂತಹ ಗುತ್ತಿನ ಸ್ತ್ರೀಯರು ಕೂಡಾ ಪರೋಕ್ಷವಾಗಿ ಭಾಗಿಯಾಗಿದ್ದಾರೆ. ಮನೆಯಲ್ಲಿ ಅಧಿಕಾರವನ್ನು ನಡೆಸುವುದು ಮಾತ್ರ ಇವರಿಗೆ ಗೊತ್ತಿರುವುದಲ್ಲ, ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿ ಜೈಲುಶಿಕ್ಷೆಯನ್ನು ಅನುಭವಿಸಲು ಸಮರ್ಥರು ಎಂದು ಸ್ಪಷ್ಟವಾಗುತ್ತದೆ. ಗುತ್ತಿನ ಅಧಿಕಾರವನ್ನು ವಹಿಸಿಕೊಂಡವರೇ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಭಾಗವಹಿಸುವುದರಿಂದ ಉಳಿದ ಸಾಮಾನ್ಯ ಜನರಿಗೂ ಪ್ರೋತ್ಸಾಹವನ್ನು ನೀಡಿದಂತಾಯಿತು. ಇದು ಒಂದು ರೀತಿಯಲ್ಲಿ ಹೊಸ ಆಲೋಚನೆಗಳಿಗೆ ಅನುಗುಣವಾಗಿ ಬದಲಾವಣೆಯ ಕರೆಗೆ ಪಲ್ಲಟಹೊಂದಿದಂತೆ. ಸ್ವಾತಂತ್ರ್ಯ ಸಿಕ್ಕ ಮೇಲೆ ಆಗುವ ಬದಲಾವಣೆಯನ್ನು ಗುತ್ತು ಒಪ್ಪಿಕೊಳ್ಳುತ್ತದೆ. ಆದರಿಂದ ತಮಗಾಗುವ ನಷ್ಟ, ಇದ್ಯಾವುದರ ಕಡೆಗೆ ಚಿಂತೆ ಮಾಡುವುದಿಲ್ಲ. ಬ್ರಿಟಿಷರ ಆಳ್ವಿಕೆ ಗುತ್ತಿನ ಆಡಳಿತಕ್ಕೆ ಪರೋಕ್ಷವಾಗಿ ತೊಂದರೆನ್ನುಂಟುಮಾಡಿರಬೇಕು, ಅಥವಾ ಸ್ವಾತಂತ್ರ್ಯದ ಬಿಸಿಗಾಳಿ ತಾಗಿರಬೇಕು ಒಟ್ಟು ಗುತ್ತು ಸ್ವಾತಂತ್ರ್ಯಹೋರಾಟದಲ್ಲಿ ಭಾಗವಹಿಸಿ ಸಮಾನತೆಯ ಮಂತ್ರವನ್ನು ಮೊಳಗಿದೆ.

ಗುತ್ತು ಸರ್ವಾಧಿಕಾರವನ್ನು ಮಾಡುತ್ತದೆ, ಗುಲಾಮಗಿರಿಯನ್ನು ಪ್ರೋತ್ಸಾಹಿಸಿದೆ ಎನ್ನುವ ಅಭಿಪ್ರಾಯಗಳಿಗೆ ಭಿನ್ನವಾಗಿ ಕಾಣಿಸಿಕೊಂಡಿದೆ. ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸುವುದರ ಪರಿಣಾಮವಾಗಿ ಸರ್ವಾಧಿಕಾರವಾಗಲಿ, ಗುಲಾಮಗಿರಿಯಾಗಲಿ, ಅಥವಾ ಬೇರೆ ಯಾವುದೇ ಶೋಷಣೆಯ ಭಾಗವಾಗಲಿ ಅದೆಲ್ಲವನ್ನು ಗುತ್ತು ನೇರವಾಗಿ ವಿರೋಧಿಸುತ್ತದೆ. ಗುತ್ತಿನ ಬಗೆಗೆ ನ್ಯೂನತೆಯನ್ನು

---

೧ ಮಹಮ್ಮದ್ ಕುಳಾಯಿ – ಮಿತ್ತಬೈಲ್ ಯಮುನಕ್ಕ – ಪು.ಸಂ. ೨೨೦

ತೋರಿಸುವವರಿಗೆ, ಈ ಅಂಶಗಳು ಅದರ ಸಂಸ್ಕೃತಿಯನ್ನು ತಿಳಿಯಲು ಸಹಕರಿಸುತ್ತದೆ. ಕೇವಲ ಅಧಿಕಾರಕ್ಕಾಗಿ ಮಾತ್ರ ಹೋರಾಟವನ್ನು ನಡೆಸುವುದಲ್ಲ, ಸಮಾನತೆಗಾಗಿ ಸ್ವಾತಂತ್ರ್ಯಕ್ಕಾಗಿಯೂ ಗುತ್ತು ಹೋರಾಟವನ್ನು ನಡೆಸಿದೆ.

ಮಿತ್ತಬೈಲಿನ ಗಡಿ ಹಿಡಿಯಬೇಕಾದ ಸುಬ್ಬಯಣ್ಣ ಸ್ವಾತಂತ್ರ್ಯ ಹೋರಾಟದಲ್ಲಿ ಸಂಪೂರ್ಣವಾಗಿ ತೊಡಗಿಕೊಂಡರು. ಅವರಿಗೆ ಮಿತ್ತಬೈಲ್ ಗುತ್ತಿನ ಅಧಿಕಾರಕ್ಕಿಂತ ಸ್ವಾತಂತ್ರ್ಯ ಹೋರಾಟ ಮುಖ್ಯ. ಆದ್ದರಿಂದ ಗುತ್ತಿನ ಅಧಿಕಾರವನ್ನು ಒತ್ತಾಯಪೂರ್ವಕವಾಗಿ ಪಡೆಯುತ್ತಾರೆ. ಅಧಿಕಾರಕ್ಕಾಗಿ ಸ್ಪರ್ಧೆ, ಕಲಹ, ಕೊಲೆ ನಡೆಯುತ್ತಿರುವ ಸಂದರ್ಭದಲ್ಲಿ ಎಲ್ಲರ ಒತ್ತಾಯಕ್ಕೆ ಮಣಿದು ಅಧಿಕಾರವನ್ನೂ ಪಡೆದುಕೊಳ್ಳುವುದು ನಿಸ್ವಾರ್ಥದ ಗುಣ. ವ್ಯಕ್ತಿ ಒಬ್ಬನಿಗಾಗಿ ಸುಖ ಸಂತೋಷಪಟ್ಟುಕೊಳ್ಳುವುದಲ್ಲ, ಎಲ್ಲರೂ ಅದನ್ನು ಅನುಭವಿಸುವಂತಾಗಬೇಕು ಎನ್ನುವುದು ಮುಖ್ಯ. ಆದರೆ, ಈ ಅಭಿಪ್ರಾಯವುಳ್ಳವರು ಸಿಗುವುದು ಅಪರೂಪ. ಗುತ್ತಿನ ಇತಿಹಾಸವನ್ನು ಗಮನಿಸಿದಾಗ ಈ ರೀತಿಯ ವ್ಯಕ್ತಿತ್ವವುಳ್ಳವರು ಕಾಣಸಿಗುತ್ತಾರೆ.

ಅಧಿಕಾರವನ್ನು ನಡೆಸಲು ಸರ್ವರೀತಿಯಲ್ಲಿಯೂ ಅವಕಾಶಗಳಿದ್ದರೂ ಸುಬ್ಬಯಣ್ಣನಿಗೆ ದೇಶಸೇವೆ ಮುಖ್ಯವಾಗುತ್ತದೆ. ಗಾಂಧೀ ಸಿದ್ಧಾಂತಗಳಿಗೆ ಆಕರ್ಷಿತರಾಗಿ ಸಮಾಜ ಸೇವೆಯಲ್ಲಿ ತೊಡಗಿಕೊಳ್ಳುತ್ತಾರೆ. ಗುತ್ತಿನ ವ್ಯವಸ್ಥೆಗಿಂತ ಭಿನ್ನವಾದ ಹಾಗೂ ಆ ಕಾಲದ ಸಾಮಾಜಿಕ ಕಟ್ಟುಪಾಡುಗಳಿಗೆ ಹೊಂದಿಕೊಳ್ಳುವ ಆದರೆ ಬದಲಾವಣೆ ಮಾಡಬೇಕಾದ ಕೆಲವು ವಿಷಯಗಳನ್ನು ಬದಲಾಯಿಸಿದರು. ಆದ್ದರಿಂದ ಸುಬ್ಬಯಣ್ಣ ಪರಂಪರೆ ಮತ್ತು ಆಧುನಿಕತೆಯ ಮಧ್ಯೆ ಸಿಕ್ಕಿಕೊಂಡಿರುವ ವ್ಯಕ್ತಿಯಾಗಿದ್ದಾರೆ. ಗುತ್ತಿನ ಸಂಸ್ಕೃತಿ ಅದುವರೆಗೆ ಯಾವುದಿತ್ತು ಅದನ್ನು ಬದಲಾವಣೆ ಮಾಡ ಹೊರಟಾಗ ವಿರೋಧಗಳು ವ್ಯಕ್ತಗೊಳ್ಳುವುದು ಸ್ವಾಭಾವಿಕ. ಆದರೆ ಸುಬ್ಬಯಣ್ಣ ಆ ರೀತಿಯ ವಿಷಯಗಳಿಗೆ ಬೆಲೆಕೊಡದೆ ತನ್ನ ನಿರ್ಧಾರವನ್ನು ಕೈಗೆತ್ತಿಕೊಂಡರು. ಹೊಸ ತತ್ವ ಸಿದ್ಧಾಂತಗಳನ್ನು, ಸಾಮಾಜಿಕ ವ್ಯವಸ್ಥೆಗಳನ್ನು ಬದಲಾವಣೆ ಮಾಡುವುದಾಗಲಿ ರೂಢಿಗೆ ತರುವುದಾಗಲಿ ಸುಲಭವಲ್ಲ. ಅದು ಸಮರ್ಥರಿಂದ, ಆರ್ಥಿಕ ಬಲವುಳ್ಳವರಿಂದ ಮಾತ್ರ ಸಾಧ್ಯವಾಗುವ ವಿಷಯ. ಗುತ್ತಿನ ವ್ಯವಸ್ಥೆಗೆ ಅಂತಹ ಸಾಮರ್ಥ್ಯವಿತ್ತು, ಪರಿಣಾಮವಾಗಿ ಬದಲಾವಣೆಗಳು ಅವರಿಂದಲೇ ಆರಂಭವಾಗುತ್ತದೆ. ಇದು ಗುತ್ತು ಸಂಸ್ಕೃತಿಯ ವಿಶೇಷತೆಯೂ ಹೌದು.

ಗುತ್ತು ಸಂಸ್ಕೃತಿಯಲ್ಲಿ ಸುಬ್ಬಯಣ್ಣನಂತಹ ಆಧುನಿಕ ಚಿಂತನೆಗಳಿರುವ ವ್ಯಕ್ತಿಗಳಿಂದ ಬದಲಾವಣೆಗಳಾಗಿವೆ. ಇಲ್ಲದಿದ್ದರೆ ಹಳೆಯ ಸಂಪ್ರದಾಯವನ್ನು ಅನುಸರಿಸಿಕೊಂಡು ಇಂದು ಅಪಹಾಸ್ಯಕ್ಕೆ ಗುರಿಯಾಗುತ್ತಿತ್ತು. ಇಂದು ಗುತ್ತು ಸಂಸ್ಕೃತಿಯ ಬಗ್ಗೆ ಹೆಮ್ಮೆ ಪಟ್ಟುಕೊಳ್ಳಲು ಇದು ಒಂದು ಮುಖ್ಯ ಕಾರಣ. ಎಲ್ಲರನ್ನು ಒಂದುಗೂಡಿಸಲು ಶಕ್ತಿ ಇರುವ ಗುತ್ತು ತನ್ನ ಬೆಳವಣಿಗೆಯಲ್ಲಿ ಎದುರಿಸಿದ ಸಮಸ್ಯೆಗಳು, ಸಂಸ್ಕೃತಿಯ ರಕ್ಷಣೆಯಲ್ಲಿ ತೊಡಗಿಕೊಂಡ ರೀತಿ ಎಲ್ಲಾ ವಿಧದಲ್ಲಿಯೂ ಮಾರ್ಗದರ್ಶಕ. ಗಾಂಧಿಯ ಪಾತ್ರದ ಮುಖಾಂತರ ಕಾದಂಬರಿಕಾರರು ಹಿಂಸೆಯಿಂದ ಸಾಧ್ಯವಾಗದುದನ್ನು ಅಹಿಂಸೆಯಿಂದ ಸಾಧಿಸಬಹುದು ಎಂದು ತೋರಿಸಿಕೊಟ್ಟಿದ್ದಾರೆ. ಗುತ್ತು ರಕ್ತದ ಜೊತೆಗೆ ಆಟವನ್ನು ಆಡಿ ಬೆಳೆದು ಗೌರವವನ್ನು ಪಡೆಯುವುದಕ್ಕಿಂತ ಹೆಚ್ಚಾಗಿ ಮಾನವೀಯ ಸೇವೆಯನ್ನು ಮಾಡಿ ಗೌರವವನ್ನು ಪಡೆಯಬಹುದು ಎಂದು ತಿಳಿಯಲು ಸಾಧ್ಯವಾಗುತ್ತದೆ.

## ೪.೫: ಗುತ್ತು ಸಂಸ್ಕೃತಿಯ ಬೆಳವಣಿಗೆಗೆ ಇತರರ ಕೊಡುಗೆ

ಗುತ್ತಿನ ಎಲ್ಲಾ ಕೆಲಸಕಾರ್ಯಗಳಿಗೆ ಕುಟುಂಬದ ಹೊರಗಿನ ಒಬ್ಬನ ಸಲಹೆ ಸೂಚನೆಗಳು ಮುಖ್ಯವಾಗಿ ಬೇಕಾಗುತ್ತಿದ್ದವು. ಅವರು ಕೈಗೊಂಡ ತೀರ್ಮಾನಗಳು ಯಾವ ರೀತಿಯಲ್ಲಿ ಕೆಲಸವನ್ನು ಮಾಡಬಹುದು ಎಂದು ಸಲಹೆಯನ್ನು, ಮಾರ್ಗದರ್ಶನವನ್ನು ಕೊಡಲು ಸಮಾಜದ ಮೇಲ್ವರ್ಗದ ಹಿರಿಯರನ್ನು ಬಳಸಿಕೊಳ್ಳುತ್ತಿದ್ದರು. ಈ ರೀತಿಯಲ್ಲಿ ಕೆಲಸಗಳನ್ನು ಮಾಡುವುದರಿಂದ ತಾವು ಹಿಡಿದ ಕಾರ್ಯ ನೆರವೇರುತ್ತದೆ ಎನ್ನುವ ಧೈರ್ಯ ಮಾನಸಿಕವಾಗಿ ಅವರನ್ನು ಪ್ರೋತ್ಸಾಹಿಸುತ್ತಿತ್ತು.

ಕಾದಂಬರಿಯ ಅರಂಭದಲ್ಲೇ, ಮಿತ್ತಬೈಲ್ ಗುತ್ತಾಗಿ ರೂಪುಗೊಳ್ಳುವ ಸಂದರ್ಭದಲ್ಲಿಯೇ ಈ ಅಂಶಗಳು ಕಾಣಿಸಿಕೊಳ್ಳುತ್ತವೆ. ಮಂಜಣ ಮಿತ್ತಬೈಲಿನ ಭೂಮಿಯನ್ನು ಕೊಂಡುಕೊಳ್ಳುವ ಸಮಯದಲ್ಲಿ ಬಡಾಜೆಯ ತಂತ್ರಿಗಳ ಬಳಿಗೆ ಬಂದು ಕಾಲಿಗೆ ಅಡ್ಡಬಿದ್ದು ವಿಷಯವನ್ನು ತಿಳಿಸುತ್ತಾರೆ. ಕಾಲಿಗೆ ಅಡ್ಡಬಿದ್ದ ಮಂಜಣನನ್ನು ನೋಡಿ ತಂತ್ರಿಯವರು ಕಣ್ಣುಮುಚ್ಚಿ ಜಪಿಸಿ, ಅನ್ನಪೂರ್ಣೇಶ್ವರಿಯ ಗಂಧಪ್ರಸಾದ ಕೊಟ್ಟು ಕೈಯಲ್ಲೊಂದು ಹಿಡಿ ಹೂವಿನ ಎಸಳುಹಾಕಿದರು. ಕೈಗೆ ಹಾಕಿದ ಎಸಳನ್ನು ಎಣಿಸಲು ಹೇಳಿದಾಗ, ಮಂಜಣ ಎಣಿಸಿ ಮುಗುಳಿ ಬಂತೆಂದು ಹೇಳಿದ್ದು ಕೇಳಿ, ಆ ಹೂವಿನ ಎಸಳುಗಳನ್ನು ಬೈರಾಸಿನಲ್ಲಿ ಕಟ್ಟಿಕೊಳ್ಳಲು ಹೇಳಿದರು. ಅಡ್ಡಬಿದ್ದು ಎದ್ದ ಯುವಕರನ್ನು ನೋಡಿ ತಂತ್ರಿಯವರು ಹೇಳಿದರು "ಈ

ಭೂಮಿಯಲ್ಲಿ ನೀವು ಬಹಳ ಒಳ್ಳೆಯದಾಗುತ್ತೀರಿ ದಂಡನಾಯಕರೇ''[೧] ಇಲ್ಲಿ ತಂತ್ರಿಯವರು ಹೇಳುವ 'ದಂಡನಾಯಕರೇ' ಹಾಗೂ 'ಗುತ್ತಿನವರೇ' ಎನ್ನುವ ಪದಗಳು ಮುಂದಿನ ಭವಿಷ್ಯದ ಸೂಚನೆಗಳನ್ನು ಕೊಡುತ್ತವೆ. ಅವರ ಮಾತಿನಂತೆ ನಡೆಯುತ್ತದೆ ಎನ್ನುವ ಬಲವಾದ ನಂಬಿಕೆ ಗುತ್ತಿನವರಲ್ಲಿದೆ. ಆ ಕಾರಣಗಳಿಂದಾಗಿ ಗುತ್ತಿನ ಮನೆಯ ಬೆಳವಣಿಗೆಯಲ್ಲಿ ಪರೋಕ್ಷವಾಗಿ ಬ್ರಾಹ್ಮಣರ, ಅಥವಾ ಹಿರಿಯರ ಆಶೀರ್ವಾದವಿದೆ. ಮಿತ್ತಬೈಲ್ ಗುತ್ತಾಗಿ ಬೆಳವಣಿಗೆ ಹೊಂದುವ ಪ್ರತಿ ಸಂದರ್ಭದಲ್ಲಿಯೂ ಹಾಗೂ ಮುಂದಕ್ಕೂ ಈ ರೀತಿಯ ಚಿತ್ರಣಗಳು ಕಾಣಸಿಗುತ್ತವೆ. ಆ ಕಾಲದಲ್ಲಿ ಬ್ರಾಹ್ಮಣರಿಗೆ ವಿಶೇಷವಾದ ಸ್ಥಾನಮಾನ, ಗೌರವ ಪ್ರಾಪ್ತವಾಗುತ್ತಿತ್ತು ಎನ್ನುವುದಕ್ಕೆ ಇದು ಉದಾಹರಣೆಯಾಗಿದೆ. ಅಧಿಕಾರದಲ್ಲಿ, ಸಾಮರ್ಥ್ಯದಲ್ಲಿ ಗುತ್ತಿಗೆ ಸರಿಸಮಾನವಾದ ಸಾಮಾಜಿಕ ಸಂಸ್ಥೆ ಬೇರಿಲ್ಲ. ಆದರೂ ತಮ್ಮ ಅಧಿಕಾರ, ಗೌರವದ ಆಚೆ ಬಂದು ಬ್ರಾಹ್ಮಣರಿಂದ ಸಲಹೆಯನ್ನು ಪಡೆಯುತ್ತಿದ್ದರು.

ಸಾಮಾಜಿಕವಾಗಿ ಇದು ಮೇಲ್ವರ್ಗದವರಿಗೆ ಕೊಡುವ ಗೌರವ ಎಂದು ಭಾವಿಸಿಕೊಂಡರು ಆದಕ್ಕಿಂತ ಹೆಚ್ಚಾಗಿ ಜೋತಿಷ್ಯ ಶಾಸ್ತ್ರ, ಪುರಾಣಗಳನ್ನು ಓದಿರುವ ಬ್ರಾಹ್ಮಣರು ಬೌದ್ಧಿಕ ಜ್ಞಾನವನ್ನು ಪಡೆದವರು. ಈ ತರಹದ ವಿದ್ಯೆಯ ಪರಿಣಾಮವಾಗಿ ವ್ಯಕ್ತಿಯ ಏಳುಬೀಳುಗಳನ್ನು ತಿಳಿದುಕೊಳ್ಳುವ ಶಕ್ತಿ ಅವರಿಗಿತ್ತು. ಆ ಕಾರಣದಿಂದಾಗಿ ಅವರ ಮಾತನ್ನು ಅನುಸರಿಸುತ್ತಿದ್ದರು. ಇದು ಭೌದ್ಧಿಕ ಜ್ಞಾನವನ್ನು ಪಡೆದವರಿಗೆ ಕೊಡುವಂತಹ ಒಂದು ಗೌರವ ಕೂಡಾ ಆಗಿದೆ.

ಬಡಾಜೆಯ ತಂತ್ರಿಗಳಂತೆ ಗೋವಿಂದಣ್ಣ ಕೂಡಾ ಗುತ್ತಿನ ಸಂಸ್ಕೃತಿಯ ಉದ್ದೀಪನದಲ್ಲಿ ಪ್ರಮುಖವಾಗಿ ಕಾಣಿಸಿಕೊಳ್ಳುತ್ತಾರೆ. ಇವರ ತತ್ವಸಿದ್ಧಾಂತಗಳು ಬೇರೆಯಾದರೂ, ಸುಬ್ಬಯಣ್ಣನಂತಹರ ಪಾಲಿಗೆ ತುಂಬಾ ಸಹಕಾರಿಯಾಗಿದೆ. ಸೇವಾಮನೋಭಾವನೆಯುಳ್ಳ ಚಿಂತನೆಗಳು, ತ್ಯಾಗಗುಣ, ತನ್ನ ದುಃಖವನ್ನು ಮರೆತು ಪರರ ದುಃಖದಲ್ಲಿ ಭಾಗಿಯಾಗುವಂತಹ ಭಾವನೆಗಳು ಗುತ್ತಿನ ಒಟ್ಟು ವ್ಯವಸ್ಥೆಯಲ್ಲಿ ಬರಲು ಕಾರಣವಾಗಿದೆ. ಸಮಾಜದ ಎಲ್ಲಾ ಒಳಿತನ್ನು, ತನ್ನ ಒಡಲಲ್ಲಿ ಸೇರಿಸಿಕೊಂಡು ಒಂದು ಪರಿಪೂರ್ಣ ಸಂಸ್ಕೃತಿಯಾಗಿ ಮೂಡಿಬರಲು ಗುತ್ತಿಗೆ ಇಂತಹ ಶ್ರೇಷ್ಠ ವ್ಯಕ್ತಿಗಳ ಸಹಕಾರ ಬೇಕಿತ್ತು.

ಗಾಂಧೀಜಿಯ ಸ್ವಾತಂತ್ರ್ಯ ಹೋರಾಟದಲ್ಲಿ ಗೋವಿಂದಣ್ಣ ಮತ್ತು ಸುಬ್ಬಯಣ್ಣ ಜೊತೆಯಾಗಿ ಭಾಗವಹಿಸಿದರು. ಗೋವಿಂದರು ಒಬ್ಬ ಅಸಾಮಾನ್ಯ ಮನುಷ್ಯ. ಯಾರಲ್ಲಿಯೂ ತನ್ನ ಸಂಸಾರದ ಕಷ್ಟಸುಖವನ್ನು ಹೇಳಿಕೊಂಡವರಲ್ಲ. ಪತ್ನಿಯ ಆರೋಗ ಗಂಭೀರವಾಗಿದ್ದರೂ ಗಾಂಧಿಯ ಆಶ್ರಮವನ್ನು

---

೧ ಮಹಮ್ಮದ್ ಕುಳಾಯಿ – ಮಿತ್ತಬೈಲ್ ಯಮುನಕ್ಕ – ಪು.ಸಂ. ೪೩

ಬಿಟ್ಟು ಮನೆಗೆ ಬರಲಿಲ್ಲ. ತನ್ನ ಮನಸ್ಸಿನ ನೋವನ್ನು ತಾನೇ ನುಂಗಿಕೊಂಡು ದೇಶ, ಸಮಾಜ, ಸ್ವಾತಂತ್ರ್ಯವೆಂದುಕೊಂಡು ಅದರಲ್ಲಿಯೇ ಕಾಲಕಳೆದರು. ಗಾಂಧೀಜಿಯೇ ಅವರನ್ನು ಅಲ್ಲಿಂದ ಕಳುಹಿಸಬೇಕಾಯಿತು. ಈ ರೀತಿಯ ತತ್ವ ಸಿದ್ಧಾಂತಗಳಿಗೆ ತಮ್ಮನ್ನು ಅರ್ಪಿಸಿಕೊಂಡವರ ಸಹವಾಸದಿಂದ ಸುಬ್ಬಯಣ್ಣನಲ್ಲಿಯೂ ಅನೇಕ ಗುಣಗಳು ಸೇರಿಕೊಂಡವು. ಒಳ್ಳೆಯವರ ಸಂಗವನ್ನು ಮಾಡಿರುವುದರ ಪರಿಣಾಮದಿಂದ ಗುತ್ತಿನ ಉನ್ನತಿ ಕೂಡಾ ಆಯಿತು. ಬಂದಿರುವ ಸುಖದುಃಖವನ್ನು ಸಮಚಿತ್ತದಿಂದ ವ್ಯವಹರಿಸುವಂತಹ ತಾಳ್ಮೆಗೆ ಈ ರೀತಿಯ ಸಂಬಂಧಗಳು ಅತ್ಯಾವಶ್ಯಕ. ಗುತ್ತಿನ ಸಾಮಾಜಿಕ ಒಡನಾಟವನ್ನು ಈ ಅಂಶಗಳು ಬಲಪಡಿಸುತ್ತವೆ. ಕಾದಂಬರಿಯಲ್ಲಿ ಈ ಚಿತ್ರಣಗಳ ಮೂಲಕ ವ್ಯಕ್ತಪಡಿಸಿದರೆ, ನಿಜ ಅರ್ಥದಲ್ಲಿಯೂ ಇಂತಹ ಗೆಳೆತನಗಳಿವೆ. ಗುತ್ತಿನ ಆರಂಭದಲ್ಲಿ ಹಿಂಸೆ, ಕೊಲೆಯ ಮೂಲಕ ಹೆಸರನ್ನು ಪಡೆದರೆ, ಕಾಲ ಬದಲಾಗುತ್ತಾ ಬಂದಾಗ ಹಿಂಸೆಯಿಂದ ಅಹಿಂಸೆಯ ಕಡೆಗೆ ತಿರುಗಲಾರಂಭಿಸಿದೆ. ಯಮುನಕ್ಕ ಕಾಲದವರೆಗೆ ಹಿಂಸೆಯಿಂದಲೇ ಹೆಸರು, ಅಧಿಕಾರವನ್ನು ಪಡೆಯಲು ಪ್ರಯತ್ನಿಸಿದರೆ, ಸುಬ್ಬಯಣ್ಣನ ಕಾಲದಲ್ಲಿ ಅಹಿಂಸೆಯ ಮಂತ್ರ ಮೊಳಗಲಾರಂಭಿಸಿದೆ. ಸಾಮಾಜಿಕ ಬದಲಾವಣೆಗಳು, ಅಥವಾ ಗುತ್ತಿನ ಸಂಪರ್ಕದ ವಿಷಯಗಳು ಇದರ ಮೇಲೆ ಪ್ರಭಾವವನ್ನು ಬೀರುತ್ತದೆ. ಸಜ್ಜನರ, ಹಿರಿಯರ ಮಾತಿಗೆ ಗೌರವವನ್ನು ಕೊಟ್ಟು ಅವರಿಂದ ಪ್ರೋತ್ಸಾಹವನ್ನು ಪಡೆಯುವುದು ಗುತ್ತಿನ ವಿಶೇಷತೆ. ತನ್ನ ಜೊತೆಗಿದ್ದ ಯಾರನ್ನೂ ದೂರಮಾಡುವ, ಅಥವಾ ಬಿಟ್ಟುಬಿಡುವ ಗುಣ ಗುತ್ತಿನದಲ್ಲ. ಭಾರತ ಸ್ವಾತಂತ್ರ್ಯಗೊಂಡು ಭಾರತ ಮತ್ತು ಪಾಕಿಸ್ತಾನಗಳು ಬೇರೆ ಬೇರೆ ದೇಶಗಳಾಗಿ ರಕ್ತಕ್ರಾಂತಿ ನಡೆಯಿತು. ಪ್ರೀತಿಯ ಸಂಕೋಲೆ ಕಡಿದು ಮನೆ ಪಾಲಾಯಿತು. "ಒಂದೇ ತಾಯಿಯ ಮಕ್ಕಳು ಗಲ್ಲಿಗಲ್ಲಿಗಳಲ್ಲಿ ಪರಸ್ಪರ ರಕ್ತ ಹರಿಸುತ್ತಾ ವೈರಿಗಳಾದರು."[೧] ದೇಶವು ಏಕತೆಯಿಂದ ಕೂಡಿದ್ದುಕೊಂಡು ಒಂದಾಗಿರಬೇಕು ಎಂದು ಬಯಸಿದ ಜನರಿಗೆ ನೋವನ್ನುಂಟುಮಾಡಿತು. ಗುತ್ತಿನಲ್ಲಿಯು ಅಂತಹ ಏಕತೆಯಿದೆ. ಅದು ಒಗ್ಗಟ್ಟಿನಲ್ಲಿರಲು ನಾನಾ ರೀತಿಯಲ್ಲಿ ಪ್ರಯತ್ನಿಸುತ್ತದೆ. ತನ್ನ ಕುಟುಂಬದಿಂದ ಯಾರನ್ನೂ ಕೂಡ ಬೇರೆ ಹೋಗಲು ಬಿಡುವುದಿಲ್ಲ. ಆ ರೀತಿಯಲ್ಲಿ ತನ್ನ ಸಾಂಸ್ಕೃತಿಕ ನಿಯಮಗಳನ್ನು ಮಾಡಿಕೊಂಡಿದೆ. ದೇಶ ಪಾಲಾಗಿ ರಕ್ತದ ಕಾಲುವೆ ಹರಿದಂತಹ ಕ್ರಮಗಳು ಗುತ್ತಿಗೆ ಬೇಕಾಗಿಲ್ಲ. ಅದು ಕೌಟುಂಬಿಕ ವಿಘಟನೆಯಿಂದ ದೂರ ಉಳಿಯುವ ಸಕಲ ಪ್ರಯತ್ನವನ್ನು ಮಾಡುತ್ತದೆ.

ಗುತ್ತಿನ ಏಕತೆ ಸಹಬಾಳ್ವೆ, ಉದಾರತೆಯ ಅಂಶಗಳು ಆಧುನಿಕ ಯುವಜನಾಂಗಕ್ಕೆ ಇಲ್ಲಿಯ ಭವ್ಯ ಸಂಸ್ಕೃತಿಯ ಬಗೆಗೆ ಗೌರವವನ್ನು ಮೂಡಿಸುತ್ತದೆ. ಹೊಸ ಚಿಂತನಾಕ್ರಮಗಳು ಈ ರೀತಿಯ ತತ್ವ,

---

೧ ಮಹಮ್ಮದ್ ಕುಳಾಯಿ – ಮಿತ್ತಬೈಲ್ ಯಮುನಕ್ಕ – ಪು.ಸಂ. ೨೫೭

ಸಿದ್ಧಾಂತಗಳ ಆಳವನ್ನು ಶೋಧನೆ ಮಾಡಿದಾಗ ಆ ಸಂಸ್ಕೃತಿಯ ಸಾರ ತಿಳಿಯುತ್ತದೆ. ಇಲ್ಲಿಯ ಮಣ್ಣಿಗೆ ಹೊಂದಿಕೊಳ್ಳುವ ಹಾಗೆ ತನ್ನ ಎಲ್ಲಾ ಚಟುವಟಿಕೆಗಳನ್ನು ಕೈಗೊಂಡ ಗುತ್ತು ಒಂದು ಸ್ಮಾರಕದಂತೆ ಉಳಿಯುವಂತಾಯಿತು. ಕೃಷಿಯೇ ಬದುಕಿನ ಮೂಲ ಎನ್ನುವ ನುಡಿಯನ್ನು ಅಮರವಾಗಿಸಿದ ಶ್ರೀಮಂತ ಪರಂಪರೆಯಿದು. ಧಾರ್ಮಿಕವಾಗಿ, ಸಾಮಾಜಿಕವಾಗಿ, ರಾಜಕೀಯವಾಗಿ ತನ್ನ ಕ್ರಮಗಳನ್ನು ಪ್ರತ್ಯೇಕವಾಗಿ ಗುರುತಿಸಿಕೊಂಡು ಇತರರು ಅನುಸರಿಸಲು ಮಾದರಿಯಾಗಿದೆ. ಸಮಾಜದ ಪ್ರತಿಯೊಂದು ವಿಧದಲ್ಲಿಯೂ ಅಭಿವೃದ್ಧಿಯನ್ನು, ಸುಧಾರಣೆಯನ್ನು ಮಾಡುವ ಮನಸ್ಸುಳ್ಳ ಗುತ್ತು ಕೆಲವು ಸಂದರ್ಭಗಳಲ್ಲಿ ತನ್ನ ಅಧಿಕಾರಬಲದಿಂದ ಸರ್ವಾಧಿಕಾರಿಯಂತೆ ವರ್ತಿಸಿಕೊಂಡರೂ, ಒಟ್ಟು ಏಳಿಗೆಯನ್ನು ಬಯಸುತ್ತದೆ. ಶೋಷಣೆ, ಸರ್ವಾಧಿಕಾರವೇ ಗುತ್ತಿನ ವಿಶೇಷ ಎನ್ನುವವರಿಗೆ ಅದರೊಳಗಿನ ಸಂಸ್ಕೃತಿಯ ವಿಶೇಷತೆಯ ಪರಿಚಯ ಇಲ್ಲಿಯಾಗುತ್ತದೆ.

*****

# ಅಧ್ಯಾಯ – ೫

## ಉಪಸಂಹಾರ

ಗುತ್ತು, ನಾವು ಸಂಸ್ಕೃತಿಯೆಂದು ಕರೆಸಿಕೊಳ್ಳುವ ಎಲ್ಲಾ ಅಂಶಗಳ ಕೇಂದ್ರವಾಗಿದೆ. ಗ್ರಾಮೀಣ ಪ್ರದೇಶದಲ್ಲಿ ನಾವು ಕಂಡಿರುವ ಗುತ್ತು, ಕೇವಲ ಆಶ್ರಯವನ್ನು ಕೊಡುವ ಒಂದು ಮನೆ, ಆದರೆ ನಾವು ನೋಡಿರದ, ನೋಡಬೇಕಾಗಿರುವ ಗುತ್ತಿನ ಚಿತ್ರಣ ಕಾದಂಬರಿಯಲ್ಲಿ ಮೂಡಿಬಂದಿದೆ. ಗುತ್ತು ಅಂದರೆ ಬಂಟರು. ಅವರ ಮದ, ಅಹಂಕಾರವೆಂದು ತಿಳಿದುಕೊಂಡವರಿಗೆ ಸಂಸ್ಕೃತಿಯ ವಿಶಿಷ್ಟಲೋಕವನ್ನು ಪರಿಚಯ ಮಾಡಿಕೊಡುತ್ತದೆ. ತುಳುನಾಡಿನ ಇತಿಹಾಸವನ್ನು ಮರುಕಳಿಸುವ ಚಿತ್ರಣ ಅನಾವರಣಗೊಂಡು ಕಾದಂಬರಿಯ ಆಳ ವಿಸ್ತಾರ ಹೆಚ್ಚಾಗಿದೆ. ಕಾದಂಬರಿಯಲ್ಲಿ ನಾಡಿನ ಸಂಸ್ಕೃತಿಯ ಪ್ರತಿಬಿಂಬದಂತೆ ಗುತ್ತು ಚಿತ್ರಿತವಾಗಿದೆ.

ರಾಜರ ಆಳ್ವಿಕೆಯ ಕಾಲದಲ್ಲೇ ಅಧಿಕಾರವನ್ನು ಪಡೆದಿರುವ ಗುತ್ತು ಆರ್ಥಿಕವಾಗಿ ಬಲಿಷ್ಠರಾಗಿರುವ ಕಾರಣದಿಂದಾಗಿ, ಅವರ ಜೀವನಕ್ರಮ ಸಂಪ್ರದಾಯ ಇತರರಿಗೆ ಅನುಸರಿಸಲು ಕಾದಂಬರಿಯಲ್ಲಿ ಮಾದರಿಯಾಗಿ ಬಂದಿದೆ. ಹೆಣ್ಣಿಗೆ ಸ್ವಾತಂತ್ರ್ಯ, ಅಧಿಕಾರದ ಅವಕಾಶಗಳನ್ನು ಮಾಡಿಕೊಟ್ಟದ್ದು ಗುತ್ತು. ಬಂಟ ಮಹಿಳೆ 'ಸಿರಿ'ಯೇ ಇದಕ್ಕೆ ಮುಖ್ಯ ನಿದರ್ಶನಳಾಗುತ್ತಾಳೆ. ಕಾದಂಬರಿಯಲ್ಲಿಯು ಗುತ್ತಿನ ಅಧಿಕಾರವನ್ನು ವಹಿಸಿಕೊಂಡ ಯಮುನಕ್ಕೆ ಕುಟುಂಬದ ಏಳಿಗೆಗಾಗಿ ತನ್ನನ್ನು ತಾನು ಸವೆಸಿಕೊಂಡಿದ್ದಾಳೆ. ಅಳಿಯ ಸಂತಾನ ಕುಟುಂಬದಲ್ಲಿ ಹೆಣ್ಣಿಗಿರುವ ಅಧಿಕಾರ, ಅದರ ಮೂಲಕ ಹೆಣ್ಣಿಗೂ ಭೂಮಿಯ ಒಡೆತನದ ಅಧಿಕಾರ ಸಿಕ್ಕಾಗ, ಅವಳ ಕ್ರಮಗಳು ಕಾದಂಬರಿಯಲ್ಲಿ ವ್ಯಕ್ತಗೊಳ್ಳುತ್ತವೆ. ತುಳುನಾಡಿನಲ್ಲಿ ಮುಖ್ಯ ಹಬ್ಬ 'ಹೊಸ ಅಕ್ಕಿ ಊಟ'. ಇಂದಿನ ಆಧುನಿಕ ಪೀಳಿಗೆಗೆ ಹೊಸ ಅಕ್ಕಿ ಊಟದ ಕಲ್ಪನೆಯೇ ಬರಲು ಸಾಧ್ಯವಿಲ್ಲ. ಆಧುನೀಕರಣದ ಪ್ರವೇಶದಿಂದಾಗಿ ಕೃಷಿ ಭೂಮಿ ಇಂದು ಕೃಷಿಯೇತರ ಭೂಮಿಯಾಗಿ ಪರಿವರ್ತನೆಗೊಂಡು ಹೊಸ ಅಕ್ಕಿ ಊಟ ಇಲ್ಲದಾಗಿದೆ. ತುಳುವ ಮಣ್ಣಿನ ಈ ಕ್ರಮಗಳನ್ನು ಆಚರಣೆ ಮಾಡಲು ಸಾಧ್ಯವಾಗದಿದ್ದರೂ ಓದಿ ತಿಳಿದುಕೊಂಡು ಆ ಹಬ್ಬಗಳ ಸಾಂಸ್ಕೃತಿಕ ಮಹತ್ವವನ್ನು ಅರಿಯುವ ಉದ್ದೇಶ ಇಲ್ಲಿಯದು.

ಸಂಸ್ಕೃತಿಯ ಪ್ರತಿನಿಧಿಯಾಗಿ ಕಾಣಿಸಿಕೊಳ್ಳುವ ಇಲ್ಲಿಯ ಅಂಶಗಳು ಆಧುನಿಕ ಜನತೆಗೆ ಹೊಸ ಅರಿವನ್ನು ಮೂಡಿಸುತ್ತದೆ. ಅವಿಭಕ್ತ ಕುಟುಂಬ ಪದ್ಧತಿಯ ಅನುಸರಣೆ ಗುತ್ತಿನ ಮನೆಗಳದ್ದಾಗಿದೆ. ಆ ಕಾರಣದಿಂದಾಗಿ ಮನೆಯ ಯಜಮಾನನ ಮಾತಿಗೆ ಗೌರವನ್ನು ಕೊಟ್ಟು ಅದರಂತೆ ನಡೆಯುತ್ತಿದ್ದರು. ಇದರಿಂದ ತಮ್ಮ ಮನಸ್ಸಿನ ಬಯಕೆಗಳು ಕೂಡಾ ನಾಶಹೊಂದಿ ಬಿಡುತ್ತವೆ. ಆದರೂ ಮನೆಯ ಯಜಮಾನನ ಮಾತಿಗೆ ಬೆಲೆಯನ್ನು ಕೊಡುತ್ತಿದ್ದರು. ಹಿರಿಯ ಕಿರಿಯ ಎನ್ನುವ ಅಂತರ ಮಾತು, ವರ್ತನೆ, ಕ್ರಿಯೆಯಲ್ಲಿಯೂ ಅನುಸರಣೆಯಲ್ಲಿತ್ತು. ಹಿರಿಯರ ಒಪ್ಪಿಗೆ ಇಲ್ಲದೆ ಹತ್ತಿರ ನಿಂತು ಮಾತನಾಡುವುದಾಗಲಿ, ಸಮಾನ ಆಸನದಲ್ಲಿ ಕುಳಿತುಕೊಳ್ಳುವುದಾಗಿ ಗುತ್ತು ಸಂಸ್ಕೃತಿಯಲ್ಲಿಲ್ಲ. ಆಧುನಿಕ ಜಗತ್ತಿಗೆ ಹೊಸ ಪಾಠವನ್ನು ಗುತ್ತು ಸಂಸ್ಕೃತಿ ಕಲಿಸಿಕೊಡುತ್ತದೆ. ತುಳು ಸಂಸ್ಕೃತಿಯ ಹೆಚ್ಚಿನ ಎಲ್ಲಾ ಅಂಶಗಳು ಗುತ್ತು ಸಂಸ್ಕೃತಿಯಲ್ಲಿ ಕಾಣಸಿಗುತ್ತದೆ. ಆದ್ದರಿಂದ ತುಳುಸಂಸ್ಕೃತಿಯ ಅಳಿವು ಉಳಿವು ಗುತ್ತಿನ ಮನೆಗಳ ಮುಖಾಂತರವಾಗಿದೆ, ಭೂತಕೋಲ, ಕಂಬಳ, ಕೋಳಿ ಅಂಕದಂತಹ ಜನಪದ ಆಚರಣೆ, ಜನಪದ ಕ್ರೀಡೆ, ಜೀವಂತವಾಗಿರಲು ಈ ಸಂಸ್ಕೃತಿಯ ಕೊಡುಗೆ ಅಪಾರ. ಇಂದು ಕಂಬಳವನ್ನು ಕೆಲವು ಕಡೆಗಳಲ್ಲಿ ಸರಕಾರದ ವತಿಯಿಂದ ನಡೆಸುತ್ತಿದ್ದರೂ ಆ ಸಂದರ್ಭದಲ್ಲಿ ಅಲ್ಲಿ ಸೃಷ್ಟಿಯಾಗುವುದು ಗುತ್ತಿನ ಮನೆಯ ವಾತಾವರಣ. ತುಳುನಾಡಿನ ಜನಪದ ಕ್ರೀಡೆಗೆ ವಿಶೇಷವಾದ ಪ್ರೋತ್ಸಾಹವನ್ನು ಗುತ್ತು ಕೊಟ್ಟಿದೆ. ಜಾತ್ರೆ, ನೇಮದ ಹೆಸರಿನಲ್ಲಿ, ನಂಬಿಕೆಯ ಚೌಕಟ್ಟಿನೊಳಗೆ ಕೋಳಿ ಅಂಕವನ್ನು ಯಾವುದೇ ಹಣದ ವ್ಯವಹಾರವಿಲ್ಲದೆ ನಡೆಸುವ ಶಕ್ತಿ ಅವರಲ್ಲಿತ್ತು. ಇಂದು ಕೂಡಾ ಹಣದ ವ್ಯವಹಾರವಿಲ್ಲದೆ ಗುತ್ತಿನ ಮನೆಯ ಮುಂದಾಳತ್ವದಲ್ಲಿ ವಿಟ್ಲ ಸಮೀಪದ ಕೇಪು ಎಂಬಲ್ಲಿ ಕೋಳಿಅಂಕ ನಡೆಯುತ್ತದೆ. ಅಂದು ಧಾರ್ಮಿಕ ಭಾವನೆಯಿಂದ ಆರಂಭಿಸಿದ ಕಂಬಳ ಇಂದು ರಾಷ್ಟ್ರಮಟ್ಟದ ಮನ್ನಣೆ ಪಡೆದಿದೆ. ಹೊಸ ವರ್ಷಾಚರಣೆ (ವಿಷು), ಕೆಡ್ಡಸ, ಪತ್ತನಾಜೆಯಂತಹ ಹಬ್ಬಗಳಿಗೆ ಸಾಂಸ್ಕೃತಿಕ ಮಹತ್ವವನ್ನು ನೀಡಿ ಅದು ಮುಂದುವರಿಯುವಂತೆ ಮಾಡಿದೆ. ಕೆಲವು ಕಡೆ ಗ್ರಾಮೀಣ ಪ್ರದೇಶಗಳಲ್ಲಿ ಕೆಡ್ಡಸ, ಪತ್ತನಾಜೆಯಂತಹ ಹಬ್ಬಗಳ ಆಚರಣೆ ಇಂದು ಕೂಡಾ ಇದೆ.

ನಿಶ್ಚಿತಾರ್ಥ, ಮದುವೆ, ಉತ್ತರಕ್ರಿಯೆಯಂತಹ ಕಾರ್ಯದ ವಿಧಿವಿಧಾನಗಳನ್ನು ಆಧುನಿಕ ಜನಾಂಗಕ್ಕೆ ತಿಳಿಯಪಡಿಸಿದೆ. ಆಧುನಿಕ ದುಂದುವೆಚ್ಚದ, ಅದ್ದೂರಿಯ ಮದುವೆಯ ಚಿತ್ರಣ ಕಾದಂಬರಿಯಲ್ಲಿಲ್ಲ. ಬಂಟ ಸಮಾಜದಲ್ಲಿ ಇಂದು ಕಡಿಮೆಯಾದರೂ, ಒಂದು ಸಂದರ್ಭದಲ್ಲಿ ಬಹುಮಟ್ಟಿಗೆ ಇದ್ದ 'ವರದಕ್ಷಿಣೆ'ಯಂತಹ ಅಂಶಗಳು ವ್ಯಕ್ತಗೊಳ್ಳದೆ, ಎಲ್ಲರಿಗೂ ಮಾದರಿಯಾಗುವಂತಹ ಮದುವೆಯ ಚಿತ್ರಣವಿದೆ. ಹಿರಿಯರು ನೋಡಿದ ಹುಡುಗಿಯ ಜೊತೆ ವಿವಾಹವಾಗುವುದು ಅಂದಿನ ಕ್ರಮ.

ಹಿರಿಯರು ಒಪ್ಪಿಕೊಂಡರೆ ಆ ಮದುವೆ ನಡೆಯುತ್ತದೆ. ಅವರ ಮಾತಿಗೆ ವಿರುದ್ಧವಾಗಿ ಹೋಗುವುದು ಗುತ್ತು ಸಂಸ್ಕೃತಿಯಲ್ಲಿಲ್ಲ. ಮುಗೇರರು ಗುತ್ತಿನ ಮನೆಯ ಒಂದು ಭಾಗವೇ ಆಗಿದ್ದರು. ಮೂಲದ ಮುಗೇರರ ಜೊತೆಗಿನ ಸಂಬಂಧ, ಹಾಗೆಯೇ ಗುತ್ತಿನ ಮನೆಯ ಜೊತೆಗೆ ಸಂಬಂಧ ಹೊಂದಿರುವ ತುಳುನಾಡಿನ ಎಲ್ಲಾ ಇತರ ಜಾತಿ, ಧರ್ಮದ ಸಂಬಂಧವೂ ಸಾಮಾಜಿಕ ಸಾಮರಸ್ಯವನ್ನು ಆಧುನಿಕ ಜನಾಂಗಕ್ಕೆ ನೀಡುತ್ತದೆ. ಅಸ್ಪೃಶ್ಯತೆಯ ಅಂಶಗಳು ಆರಂಭದಲ್ಲಿದ್ದರು. ಆಧುನಿಕ ಚಿಂತನೆ, ಗಾಂಧಿತತ್ವದ ಪ್ರಭಾವದಿಂದಾಗಿ ಅದು ಕ್ರಮೇಣ ಕಡಿಮೆಯಾಯಿತು. ತಮ್ಮ ಭೂಮಿಯಲ್ಲಿ ದುಡಿಯುವ ವರ್ಗದವರಿಗೆ ಪ್ರಾಥಮಿಕ ಅವಶ್ಯಕತೆಗಳನ್ನು ಪೂರೈಸಿ ಕೊಡುವುದರ ಚಿತ್ರಣ ಗುತ್ತು ಸಂಸ್ಕೃತಿಯ ಮಾನವೀಯತೆಯನ್ನು ತೋರಿಸುತ್ತದೆ. ಅಂದು ಬೆಳೆಯುವ ಭತ್ತ, ಗದ್ದೆಯನ್ನು ಉಳಿಮೆ ಮಾಡಲು ಬಳಸುವ ಕೋಣಗಳ ಸಂಖ್ಯೆ ಇದೆಲ್ಲವೂ ಗುತ್ತಿನ ಕೃಷಿಭೂಮಿಯ ವಿಸ್ತಾರವನ್ನು ತಿಳಿಸುತ್ತದೆ. ಇಂದು ಕೇಳದಂತಹ ಅನೇಕ ವಿಧದ ಭತ್ತವನ್ನು ಗುತ್ತಿನ ಬೇರೆ ಬೇರೆ ಉಪಯೋಗಕ್ಕೆ ಬಳಸುತ್ತಿದ್ದರು. ಕೃಷಿಯಲ್ಲಿ ತಾವೇ ತೊಡಗಿ ಬೆಳೆಯನ್ನು ಪಡೆಯುವ ಪಾಠವನ್ನು ತಿಳಿಸಿಕೊಟ್ಟಿದೆ. 'ತಾನು ಮಾಡಿದರೆ ಉತ್ತಮ' ಎನ್ನುವ ತತ್ವ ಗುತ್ತಿನ ಕೃಷಿಯಲ್ಲಿ ವ್ಯಕ್ತಗೊಳ್ಳುತ್ತದೆ. ಕೃಷಿಗಾಗಿ ಗದ್ದೆಯನ್ನು ಮಾಡಲು ತಾವು ಪಡುವ ಶ್ರಮ, ಸಾಧಿಸಬೇಕೆನ್ನುವ ಛಲ ಗುತ್ತು ಸಂಸ್ಕೃತಿಯ ವೈಶಿಷ್ಟ್ಯ. ಆಧುನಿಕ ಯುವಜನಾಂಗ ಕೃಷಿಯಿಂದ ದೂರವಾಗಿ ನಗರ ಸಂಸ್ಕೃತಿಗೆ ಪಲ್ಲಟ ಹೊಂದುತ್ತಿರುವ ಸಂದರ್ಭದಲ್ಲಿ ಕೃಷಿ ಬದುಕಿನ ವಿಶೇಷತೆಯನ್ನು ಸಿಗುವ ನೆಮ್ಮದಿಯನ್ನು ವ್ಯಕ್ತಪಡಿಸಿದ್ದಾರೆ. ಗುತ್ತು ಎಂದು ಕರೆಸಿಕೊಳ್ಳಬೇಕಾದರೆ ಕೇವಲ ಮನೆ, ಅಧಿಕಾರ ಸಾಲದು, ಕೃಷಿಯನ್ನೂ ಮಾಡಬೇಕು. ಅದರಿಂದಲೇ ಗೌರವ ಪ್ರಾಪ್ತವಾಗುತ್ತದೆ ಎಂದು ಪರೋಕ್ಷವಾಗಿ ವ್ಯಕ್ತಗೊಂಡಿದೆ. ಗುತ್ತಿನ ಶ್ರೀಮಂತಿಕೆ, ವೈಭೋಗ ಎಲ್ಲವೂ ಕೃಷಿಯಿಂದ ಬಂದಿರುವುದು. ಅದು ತಪ್ಪಿ ಹೋದರೆ ಅಸ್ತಿತ್ವದ ಪ್ರಶ್ನೆ ಕಾಡುತ್ತದೆ. ಅದಕ್ಕಾಗಿ ಕಾದಂಬರಿಯಲ್ಲಿ ಜಗಳ, ಕೊಲೆ ನಡೆಯುವುದನ್ನು ತೋರಿಸಿಕೊಟ್ಟಿದ್ದಾರೆ.

ಅಧಿಕಾರಕ್ಕಾಗಿ ಸಂಘರ್ಷವು ಕಾದಂಬರಿಯ ಬಹುಮುಖ್ಯಭಾಗ. ಗುತ್ತಿನ ಅಧಿಕಾರವಾಗಲಿ ಭೂತದ ಗಡಿ ಹಿಡಿಯುವುದಾಗಲಿ ಎಲ್ಲವೂ ಗೌರವದ ಪ್ರಶ್ನೆ, ಆದ್ದರಿಂದ ಗುತ್ತಿನ ಮನೆಗಳ ಘರ್ಷಣೆ ಎನ್ನುವುದು ಸ್ವಾಭಾವಿಕ. ಒಂದು ಬದಿಯಲ್ಲಿ ಕ್ಷಾತ್ರ ಪ್ರವೃತ್ತಿ ಹಾಗೂ ಮನೆತನದ ಗೌರವ ಕಾಪಾಡುವುದು ಕಂಡು ಬಂದರೆ, ಇನ್ನೊಂದು ಬದಿಯಲ್ಲಿ ಅಮಾಯಕ, ಅಸಮರ್ಥ ಜನರಲ್ಲಿ ತಮ್ಮ ಭುಜಬಲವನ್ನು ತೋರಿಸಿಕೊಟ್ಟಂತೆ ಆಗುತ್ತದೆ. ತಪ್ಪುಮಾಡಿದವರಿಗೆ ಶಿಕ್ಷೆಯನ್ನು ಕೊಡುವುದರ ಜೊತೆಗೆ ಅವರ ಚರಿತ್ರೆಯನ್ನೇ ನಾಶಮಾಡುವುದು ಗುತ್ತು ಸಂಸ್ಕೃತಿಯ ಒಂದು ಭಾಗವಾಗಿದೆ. ರಾಜರ ಆಳ್ವಿಕೆಯಲ್ಲಿ ಪರೋಕ್ಷವಾಗಿ ಗುತ್ತು ಕೂಡಾ ಭಾಗಿಯಾಗಿದೆ. ರಾಜರ ಸಿಂಹಾಸನವನ್ನೇರುವ ಸಂದರ್ಭವಾಗಲಿ, ಸೈನ್ಯಕ್ಕೆ

ಜನರನ್ನು ಸೇರಿಸುವುದಾಗಲಿ ದೊರೆಯುವುದು ಗೌರವಸ್ಥ ನಂಬಿಕೆಯುಳ್ಳ ಗುತ್ತಿನವರಿಗೆ, ರಾಜರ ಆಡಳಿತಲ್ಲಿ ಇವರ ಸಲಹೆ, ಸೂಚನೆಗಳು ಅವಶ್ಯಕ. ಆರ್ಥಿಕ ಸಾಮರ್ಥ್ಯವುಳ್ಳವರಾಗಿದ್ದ ಕಾರಣ ಇವರ ಮಾತಿಗೆ ಗೌರವ, ಮನ್ನಣೆಯು ದೊರೆಯುತ್ತಿತ್ತು. ನ್ಯಾಯ ತೀರ್ಮಾನದಂತಹ ಅಧಿಕಾರ ದೊರೆತಿರುವುದು ಒಂದು ದೊಡ್ಡ ಗೌರವವೇ ಸರಿ. ಕಾದಂಬರಿಯಲ್ಲಿ ಕಾಣಿಸಿಕೊಂಡ ಹಾಗೆ, ಟಿಪ್ಪುಸುಲ್ತಾನ್, ಕಲ್ಯಾಣಸ್ವಾಮಿ, ಕುಂಬಳೆಯ ಅರಸರು, ಗಾಂಧೀಜಿ, ಗೋವಿಂದಣ್ಣನಂತಹ ಚಾರಿತ್ರಿಕ ವ್ಯಕ್ತಿಗಳ ಸಂಬಂಧ ಗುತ್ತಿಗೆನೊಂದಿಗಿದೆ. ಸ್ವಾತಂತ್ರ್ಯ ಸಂಗ್ರಾಮದಲ್ಲಿ ಅವರ ಪಾತ್ರ, ಅಹಿಂಸಾ ತತ್ವ ಇದು ಗುತ್ತಿನ ಮೇಲೆ ಪ್ರಭಾವವನ್ನು ಬೀರಿ ಅವರು ಅದರಲ್ಲಿ ಭಾಗಿಯಾಗುವುದರ ಮೂಲಕ ಗುತ್ತು ಸಂಸ್ಕೃತಿಯ ವಿಶೇಷತೆ ವ್ಯಕ್ತಗೊಳ್ಳುತ್ತದೆ. ಅಧಿಕಾರಕ್ಕಾಗಿ ಘರ್ಷಣೆ ಮಾತ್ರವಲ್ಲ ಸರ್ವರಿಗೂ ಸ್ವಾತಂತ್ರ್ಯ. ಬದುಕುವ ಹಕ್ಕನ್ನು ಒಳಗೊಂಡ, ಮಾನವ ಬದುಕಿನ ಸಕಲ ಸಂಬಂಧವನ್ನು ಮೈಗೂಡಿಸಿಕೊಂಡ ಒಂದು ವ್ಯವಸ್ಥೆಯಾಗಿ ಗುತ್ತು ನಿರ್ಮಾಣಗೊಂಡಿದೆ. ಕಾಲಕ್ಕೆ ತಕ್ಕಂತೆ ಬದಲಾವಣೆಯನ್ನು ತಂದು ಹೊಸ ಆಲೋಚನೆ, ಮನಸ್ಸುಗಳಿಗೆ ಅವಕಾಶವನ್ನು ಮಾಡಿಕೊಟ್ಟು, ಒಂದೇ ವ್ಯವಸ್ಥೆಗೆ ಅಂಟಿಕೊಳ್ಳದೆ ಹಳೆಯ ಕಲ್ಮಶಗಳನ್ನು ತೊಡೆದು ಹಾಕಿ ಶುದ್ಧಗೊಂಡು ಮತ್ತಷ್ಟು ಪ್ರಜ್ವಲಿಸುವ ಚಿಂತನೆಗಳು ಅಲ್ಲಿವೆ. ಸ್ವಾರ್ಥಕ್ಕೋಸ್ಕರ ಸಮಾಜದ ವ್ಯವಸ್ಥೆಯನ್ನು ಬದಲಾಯಿಸುವ ಸ್ಥಿತಿ ಅಲ್ಲಿಲ್ಲ ಸಮಾಜದ ಒಳಿತನ್ನು ಕಾಣುವ, ಎಲ್ಲ ಜಾತಿ, ಧರ್ಮದ ಜೊತೆಗೆ ಪ್ರೀತಿಪೂರ್ವಕ ಸಂಬಂಧ ವ್ಯಕ್ತಗೊಳ್ಳುತ್ತದೆ.

ಅಧಿಕಾರವಿದ್ದಾಗ ತಮಗಾಗಿ ಕಾನೂನು ಬದಲಾವಣೆ ಮಾಡಿಕೊಂಡಂತೆ ಕೆಲವು ಸಂದರ್ಭಗಳಲ್ಲಿ ಗೋಚರವಾಗುತ್ತದೆ. ಕಾದಂಬರಿಯಲ್ಲಿ ಯಮುನಕ್ಕನ ಕ್ರಮಗಳು ಕುಟುಂಬದ ಗೌರವಕ್ಕೋಸ್ಕರ ಮಾಡಿದರೂ ಅಧಿಕಾರ ಬಲದ ಆಕ್ರಮಣಶೀಲತೆ ಕಾಣಿಸಿಕೊಳ್ಳುತ್ತದೆ. ಇದನ್ನು ಪ್ರಶ್ನಿಸಲು ಶಕ್ತಿ ಇಲ್ಲದಿದ್ದಾಗ ಸಾಮರ್ಥ್ಯವಾಗಿ ಪರಿಗಣಿಸಲ್ಪಡುತ್ತದೆ. ಸಂಸ್ಕೃತಿಯಲ್ಲಿ ಒಳಿತು ಕೆಡುಕುಗಳು ಸೇರಿಕೊಂಡು, ಕೆಡುಕನ್ನು ದೂರಗೊಳಿಸುವ ಅಗತ್ಯತೆ ಅಲ್ಲಿತ್ತು.

ಜಾಗತೀಕರಣದ ಪರಿಣಾಮವಾಗಿ 'ಗುತ್ತು' ಎನ್ನುವುದು ಅಧಿಕಾರವನ್ನು ಕಳೆದುಕೊಂಡ ಒಂದು ವ್ಯವಸ್ಥೆ. ಅದ್ದರಿಂದ ಅದರ ಸಂಸ್ಕೃತಿ ಈ ಕಾಲದಲ್ಲಿ ಪ್ರತ್ಯಕ್ಷ ತಿಳಿಯಲು ಸಾಧ್ಯವಿಲ್ಲ. ಡಿ.ಕೆ. ಚೌಟರು ಗುತ್ತಿನ ಸಂಸ್ಕೃತಿಯನ್ನು ಮುಂದಿನ ಪೀಳಿಗೆಗೆ ತಿಳಿಸುವ ಕೆಲಸವನ್ನು ಇಲ್ಲಿ ಕೈಗೆತ್ತಿಕೊಂಡಿದ್ದಾರೆ. ಗುತ್ತು ಸಂಸ್ಕೃತಿ ಆಧುನೀಕರಣದ ಪರಿಣಾಮವಾಗಿ ಕ್ಷೀಣಗೊಂಡಿದೆ. ಕೃಷಿ, ಅಧಿಕಾರ ಎನ್ನುವ ಈ ಕಲ್ಪನೆಗಿಂತ ಹೊರತಾಗಿ ಆದುನಿಕ ಜಾಯಮಾನಕ್ಕೆ ಹೊಂದಿಕೊಂಡು ಉದ್ಯೋಗವನ್ನು ನಡೆಸಲು, ವೃತ್ತಿಯನ್ನು

ಮಾಡಲು ತೊಡಗಿಕೊಂಡಿದ್ದಾರೆ. ಇದರಿಂದಾಗಿ ಗುತ್ತು ಆಧಾರವಿಲ್ಲದೆ ನಶಿಸತೊಡಗಿದೆ. ಇಷ್ಟೊಂದು ಸಂಸ್ಕೃತಿಯನ್ನು, ಸಂಬಂಧಗಳನ್ನು ಹೊಂದಿರುವ ಈ ವ್ಯವಸ್ಥೆಯನ್ನು ಇತಿಹಾಸದ ಸಾಕ್ಷಿಯಂತೆ ರಕ್ಷಿಸಬೇಕಾದುದು ಅನಿವಾರ್ಯ. ಸಮಾಜ ಸಂಸ್ಕೃತಿಯಾಗಿ ರೂಪುಗೊಳ್ಳಬೇಕು ಎನ್ನುವ ಅಂಶ ಕಾದಂಬರಿಯಲ್ಲಿ ವ್ಯಕ್ತಗೊಂಡು ಸಂಸ್ಕೃತಿಯ ಪ್ರತಿನಿಧೀಕರಣವನ್ನು ಮಾಡಹೊರಟಿದೆ. ಗುತ್ತಿನ ಒಳಿತು ಕೆಡುಕು ಎರಡನ್ನು ತಿಳಿಸುವುದರ ಮೂಲಕ ಗುತ್ತಿನ ವೈಭವೀಕರಣದ ಉದ್ದೇಶ ಮಾತ್ರವಲ್ಲ, ಅದರ ಸಮಸ್ಯೆಗಳನ್ನು ಸಮಾಜದ ಮುಂದಿಟ್ಟಿದೆ. ತುಳುವ ಮಣ್ಣಿನ ಸಾಂಸ್ಕೃತಿಕ ಚಿತ್ರಣವೂ ವ್ಯಕ್ತಗೊಂಡು, ಗುತ್ತು ಸಂಸ್ಕೃತಿಯನ್ನು ತಿಳಿದುಕೊಳ್ಳುವಾಗ ತುಳು ಸಂಸ್ಕೃತಿಯ ಮೇಲೆಯೂ ಕಣ್ಣಾಡಿಸಿದಂತೆ ಅನುಭವವಾಗುತ್ತದೆ. ಆ ಮೂಲಕ ಗುತ್ತು ಸಂಸ್ಕೃತಿಯ ಪ್ರತಿನಿಧೀಕರಣವೂ ಕಾದಂಬರಿಯಲ್ಲಿ ವ್ಯಕ್ತಗೊಂಡು ಆ ಸಂಸ್ಕೃತಿಯನ್ನು ರಕ್ಷಿಸಬೇಕಾದ, ಜೀವನದಲ್ಲಿ ಅಳವಡಿಸಿಕೊಳ್ಳಬೇಕಾದ ಸಂದೇಶವನ್ನು ಹೇಳಿದೆ.

ಕಾದಂಬರಿಯ ಶೀರ್ಷಿಕೆಯ ಮೇಲೆ ಗಮನ ಹರಿಸಿದರೆ ಗುತ್ತಿನೊಡತಿಯ ಅಧಿಕಾರದ ಚಿತ್ರಣ ಸ್ಪಷ್ಟತೆಗೊಳ್ಳುತ್ತದೆ. ಯಮುನಕ್ಕನೇ ಮಿತ್ತಬೈಲ್‌ಗೆ ಒಡತಿ ಎನ್ನುವ ರೀತಿಯಲ್ಲಿ ಮೂಡಿಬಂದಿದೆ. ಇದು ಒಟ್ಟು ಬಂಟ ಸಮಾಜದಲ್ಲಿ ಅಥವಾ ಗುತ್ತಿನ ಮನೆಗಳಲ್ಲಿ ಮಾತೃಪ್ರಧಾನ ವ್ಯವಸ್ಥೆಯ ಕಲ್ಪನೆಯನ್ನು ಮುಂದಿಡುತ್ತದೆ. ಮಿತ್ತಬೈಲನ್ನು ಗುತ್ತಾಗಿ ರೂಪುಗೊಳಿಸಿರುವ ಮಂಜನಾಳ್ವನ ಹೆಸರಿನ ಮೂಲಕ ಕಾದಂಬರಿಯ ಶೀರ್ಷಿಕೆ ಬಂದಿಲ್ಲ. ಗುತ್ತಿನ ಮನೆಗಳಲ್ಲಿ ಮನೆಯೊಡತಿಯ ಅಧಿಕಾರದ ಚಿತ್ರಣವನ್ನು ಇದು ವ್ಯಕ್ತಪಡಿಸುತ್ತದೆ. ಇದು ಗುತ್ತು ಸಂಸ್ಕೃತಿಯ ಒಂದು ಮುಖ್ಯ ಭಾಗವೂ ಆಗಿದೆ. ಗುತ್ತಿನ ಸಾಂಸ್ಕೃತಿಕ ಕಥನವನ್ನು ಬಿಚ್ಚಿಡುವುದರ ಮೂಲಕ ಆಧುನಿಕ ಜಗತ್ತಿನ ಹೊಸತೊಂದು ಜಗತ್ತನ್ನು ತೋರಿಸುವ ಪ್ರಯತ್ನ ಇಲ್ಲಿಯದು. ಇಂದಿನ ಆಧುನಿಕ ಯುವ ಜನಾಂಗ ಬದುಕಿನ ಜಂಜಾಟದಲ್ಲಿ ಸಂಸ್ಕೃತಿಯನ್ನು ನಿರ್ಲಕ್ಷಿಸುತ್ತಿದ್ದಾರೆ. ಸಂಸ್ಕೃತಿಯ ಮಹತ್ವ, ಅದರಿಂದ ದೊರಕುವ ಮಾನಸಿಕ ನೆಮ್ಮದಿ ಅವರ ಪಾಲಿಗೆ ಇಲ್ಲದಾಗಿದೆ. ಬದುಕಿನ ಪ್ರತಿಯೊಂದು ಸಮಸ್ಯೆಗೂ ಉತ್ತರವನ್ನು ದೊರಕಿಸಿಕೊಡುವ ಈ ಸಂಸ್ಕೃತಿಯ 'ಗುತ್ತು' ಎನ್ನುವ ವ್ಯವಸ್ಥೆಯ ಒಳಗೆ ಸೇರಿಕೊಂಡಿದೆ. ಆದ್ದರಿಂದ ಗುತ್ತಿನ ಮೂಲಕ ಸಂಸ್ಕೃತಿಯು ಅನಾವರಣಗೊಳ್ಳಲು ಸಾಧ್ಯವಾಯಿತು.

ಸಂಸ್ಕೃತಿ ಅಥವಾ ಸಾಂಸ್ಕೃತಿಕ ವಿಷಯಗಳನ್ನು ಹುಡುಕಿ ತೆಗೆಯುವ ಸಂದರ್ಭದಲ್ಲಿ, 'ಗುತ್ತು' ಎನ್ನುವ ಕೌಟುಂಬಿಕ ಪರಿಧಿಯಲ್ಲಿ ಸಂಸ್ಕೃತಿ ಸೇರಿಕೊಂಡು ಹೆಚ್ಚು ಜನಪ್ರಿಯವಾಯಿತು. ಸಂಸ್ಕೃತಿಯನ್ನು

ಪ್ರತಿನಿಧೀಕರಿಸುವ ಒಂದು ಮಾಧ್ಯಮದಂತೆ ಗುತ್ತು ಕಾರ್ಯವನ್ನು ನಿರ್ವಹಿಸಿದೆ. ಪರಿಣಾಮವಾಗಿ ಸಂಸ್ಕೃತಿಯ ರಕ್ಷಣೆಗೆ, ಬೆಳವಣಿಗೆಗೆ ತನ್ನೆಲ್ಲ ಶಕ್ತಿಯನ್ನು ವಿನಿಯೋಗಿಸಿದೆ. ಈ ನೆಲದಲ್ಲಿ ಹುಟ್ಟಿಬೆಳೆದು ಇಲ್ಲಿಯ ಲೋಕವಿಚಾರಗಳನ್ನು ತಿಳಿಯದವರಿಗೆ ಸಂಸ್ಕಾರ ವಿಚಾರಗಳನ್ನು, ಸಾಂಸ್ಕೃತಿಕ ಮಹತ್ವವನ್ನು, ಗುತ್ತು ಸಂಸ್ಕೃತಿಯ ವೈಶಿಷ್ಟ್ಯವನ್ನು ಅರೆದರೆದು ಕುಡಿಸುವ ಕೆಲಸ ಇಲ್ಲಿಯದು. ಗುತ್ತಿನ ಬಗ್ಗೆ ಕೇವಲವಾಗಿ ಮಾತನಾಡುವವರಿಗೆ ಅಲ್ಲಿಯ ವಿಶೇಷತೆ ಇಲ್ಲಿ ವ್ಯಕ್ತಗೊಳ್ಳುತ್ತದೆ. ಪರಿಶ್ರಮ, ಸಾಹಸದ ಮನೋಭಾವನೆಯಿದ್ದರೆ ಜೀವನದಲ್ಲಿ ಎಂತಹ ಕೆಲಸವನ್ನು ಬೇಕಾದರೂ ಮಾಡಬಹುದು. ಗುತ್ತನ್ನು ನಿರ್ಮಾಣ ಮಾಡಿರುವ ಬಂಟರು ಪಟ್ಟ ಶ್ರಮ, ಸುರಿಸಿದ ಬೆವರು ಅವರಿಗೆ ಅಧಿಕಾರವನ್ನು ಕೊಟ್ಟಿತು. ಆರ್ಥಿಕ ಸಂಪನ್ನರಾಗಿರುವುದರ ಹಿಂದಿನ ಬದುಕಿನ ಚಿತ್ರಣ ಬಹಳ ಸಾಹಸದ್ದು. ಆ ಸಾಹಸ ಮನೋಭಾವನೆಯಿಂದಲೇ ಎಲ್ಲಾ ಕ್ಷೇತ್ರಗಳಲ್ಲಿಯೂ ಮುಂದೆ ಬರಲು ಸಾಧ್ಯವಾಯಿತು.

ದೈವದೇವರುಗಳ ಆರಾಧನೆಯಲ್ಲಿ ಶಿಸ್ತನ್ನು ತಂದು ಭಯಭಕ್ತಿಯನ್ನು ಮೂಡಿಸಿತು. ಜಾತಿವ್ಯವಸ್ಥೆಯು ದೈವ ದೇವರುಗಳ ಸ್ಥಳಗಳಲ್ಲಿ ಬಲವಾಗಿ ಆಚರಣೆಯಲ್ಲಿದ್ದರೂ ಕಾಲ ಕ್ರಮೇಣ ಬದಲಾವಣೆಗಳು ಬರತೊಡಗಿದವು. ಶಿಕ್ಷಣದಂತಹ ಜ್ಞಾನ ಸಂಪಾದನೆಯ ಸಾಧನೆಗಳ ಮೂಲಕ ಈ ಪದ್ಧತಿಗಳು ದೂರಗೊಳ್ಳುವುದರ ಮೊದಲೇ ಗುತ್ತು ಜಾತಿ ವ್ಯವಸ್ಥೆಯ ಕ್ರಮಗಳನ್ನು ವಿರೋಧಿಸಿ, ಸಮಾಜಕ್ಕೆ ಮಾದರಿಯಾಗಿತ್ತು. ಅಧಿಕಾರದ ಬಲದಿಂದ ಏನನ್ನೂ ಬೇಕಾದರೂ ಪಡೆಯಲು ಸಾಧ್ಯವಿದ್ದರೂ ತಮ್ಮ ನೈತಿಕ ಕ್ರಮವನ್ನು ಬಿಟ್ಟು ಅಡ್ಡದಾರಿಯನ್ನು ಹಿಡಿದಿಲ್ಲ. ಇದರಿಂದಾಗಿ ಗುತ್ತಿನ ಆಡಳಿತ ಭಾಗಕ್ಕೆ ಸಂಬಂಧಿಸಿ ಕೆಟ್ಟ ಅಭಿಪ್ರಾಯಗಳು ಮೂಡಲು ಸಾಧ್ಯವಿಲ್ಲ. ಅಧಿಕಾರವೇ ಗುತ್ತಿನ ಬಹುದೊಡ್ಡ ಸಂಪತ್ತು. ಅದನ್ನು ಹೇಗೆ ನಿರ್ವಹಿಸಿದರು ಎಂಬುದರ ಬಗ್ಗೆ ಮಾತಾಡುವ ಹಾಗಿಲ್ಲ. ಆದರೆ ಅಧಿಕಾರ ಎನ್ನುವುದು ಸರಿಯಾದ ಕ್ರಮದಲ್ಲಿರಬೆಕು. ಅಲ್ಲಿ ಅನ್ಯಾಯ, ಮೋಸ ನಡೆದರೆ ಆಗುವ ಚಿತ್ರಣವೇ ಬೇರೆ ಎನ್ನುವುದನ್ನು ಆಧುನಿಕ ಜನತೆಗೆ ಗುತ್ತು ಸಂಸ್ಕೃತಿ ತಿಳಿಸಿಕೊಟ್ಟಿದೆ. ಗುತ್ತಿನ ಸಾಂಸ್ಕೃತಿಕ ಬದುಕೇ ಆಧುನಿಕ ಜನಾಂಗಕ್ಕೆ ಮಾದರಿಯಾಗುವ ಕ್ರಮದಂತೆ ಕಾದಂಬರಿಕಾರರು ಕಥನ ಸ್ವರೂಪವನ್ನು ನಿರ್ಮಿಸಿದ್ದಾರೆ. ವಾಸ್ತವ ಬದುಕಿನ ಎಲ್ಲಾ ಚಿತ್ರಣಗಳು ಕಾದಂಬರಿಯಲ್ಲಿ ಮೂಡಿ ಈಗಿನ ನಮ್ಮ ಮನೋಲೋಕಕ್ಕೆ ಸರಿಯಾದ ಮಾರ್ಗದರ್ಶನವನ್ನು ನೀಡುತ್ತದೆ. ತುಳುನಾಡಿನ ಸಮಗ್ರ ಸಂಸ್ಕೃತಿಯ ಬಗೆಗೆ ಸರಿಯಾದ ವಿವರಣೆಯನ್ನು ಕೊಟ್ಟು, ಆ ಸಂಸ್ಕೃತಿಯನ್ನು ಆಧುನಿಕ ಚಿಂತನೆಗಳ ನಡುವೆಯೂ ಅಲ್ಪಸ್ವಲ್ಪ ಬದಲಾವಣೆಯನ್ನು ಮಾಡಿ ಉಳಿಸಿಕೊಳ್ಳಬೇಕಾದುದು ಅನಿವಾರ್ಯ. ಇಲ್ಲದಿದ್ದರೆ ಮುಂದಿನ ಜನಾಂಗಕ್ಕೆ ಅನೇಕ ವಿಷಯಗಲು ಲಭಿಸಲು ಸಾದ್ಯವಿಲ್ಲ. 'ಗುತ್ತು' ಎನ್ನುವುದೇ ಇಂದು ಕೇವಲ 'ಮನೆ' ಎನ್ನುವ ಮಟ್ಟಕ್ಕೆ ಬಂದುಬಿಟ್ಟಿದೆ.

ಇಂತಹ ಸಂದರ್ಭದಲ್ಲಿ ಅಲ್ಲಿನ ಸಂಸ್ಕೃತಿ ಹೇಗೆ ತಿಳಿಯಲು ಸಾಧ್ಯ. ಆದ್ದರಿಂದ ಇಂತಹ ಕೃತಿಗಳ ಮೂಲಕ ಆ ಸಂಸ್ಕೃತಿಯ ಮಹತ್ವವನ್ನು, ಅಲ್ಲಿರುವ ಸಾರವನ್ನು ತಿಳಿಯುವ ಪ್ರಯತ್ನ ಮಾಡಿದ್ದಾರೆ.

ಒಟ್ಟು ಕಥನ ವಿನ್ಯಾಸವು ಗುತ್ತು ಮತ್ತು ಅದರ ಸುತ್ತ ಮುತ್ತ ಇರುವ ಪ್ರದೇಶವನ್ನೊಳಗೊಂಡು ರೂಪುಗೊಂಡಿದೆ. ಇದರ ಮೂಲಕ ಗುತ್ತಿನ ಅಧಿಕಾರ ಹಾಗೂ ಅಲ್ಲಿಯ ಸಂಪೂರ್ಣ ಹಿಡಿತವನ್ನು ವ್ಯಕ್ತಪಡಿಸುತ್ತದೆ. ಅಲ್ಲಿ ನಡೆಯುವ ಚಿತ್ರಣಗಳಲ್ಲಿ ಗುತ್ತು ಸಂಸ್ಕೃತಿಯ ಪ್ರಾಮುಖ್ಯತೆ, ವಿಶೇಷತೆ ಸ್ಪಷ್ಟಗೊಳ್ಳುತ್ತದೆ. ಇದರ ಜೊತೆಗೆ ತುಳುವ ಮಣ್ಣಿನ ಸಾಂಸ್ಕೃತಿಕ ಅನನ್ಯತೆಯು ಬೆಳಕಿನೆಡೆಗೆ ಬರುವಂತಾಯಿತು. ಕಾದಂಬರಿಯ ಎಲ್ಲಾ ಮುಖಗಳಲ್ಲೂ ಗುತ್ತು ಸಂಸ್ಕೃತಿಯ ಪ್ರತಿನಿಧೀಕರಣ ವ್ಯಕ್ತಗೊಂಡು, ಗುತ್ತು ಸಂಸ್ಕೃತಿಯನ್ನು ಪುರಸ್ಕರಿಸುವ ಮನಃಸ್ಥಿತಿ ಓದುಗರಲ್ಲಿ ಉಂಟಾಗುವಂತೆ ಸಾಂಸ್ಕೃತಿಕ ಕಥನವನ್ನು ಸೃಷ್ಟಿಮಾಡಿದ್ದಾರೆ. ಗುತ್ತೊಂದರ ಒಳಜಗತ್ತು ಹೇಗಿದೆ ಎಂದು ತಿಳಿಯುವ ಅವಕಾಶ ಇಲ್ಲಿದೆ. ಇದು ಹಲವು ಲೋಕವಿಚಾರಗಳನ್ನು ತಿಳಿಸುತ್ತಾ, ಸಾಂಸ್ಕೃತಿಕ ಮಹತ್ವವನ್ನು ವ್ಯಕ್ತಪಡಿಸುತ್ತಾ ಗುತ್ತು ಸಂಸ್ಕೃತಿಯ ಪ್ರತಿನಿಧೀಕರಣವನ್ನು ಮಾಡಿದೆ. ಗುತ್ತಿನ ಒಳಜಗತ್ತಿನ ಸಂಪೂರ್ಣ ವಿವರವನ್ನು ಸಮಾಜದ ಮುಂದಿಟ್ಟು ಸಮಾಜದ ಮೆಚ್ಚುಗೆಯನ್ನು ಪಡೆದು ಗುತ್ತಿನ ಸಂಸ್ಕೃತಿಯ ಬಗೆಗೆ ಗೌರವವನ್ನು ಪಡೆಯುವಂತಾಯಿತು. ಒಳ್ಳೆಯದನ್ನು ಹೇಳುವ, ಕೆಟ್ಟದನ್ನು ಮುಚ್ಚಿಡುವ ಕಾರ್ಯವನ್ನು ಕಾದಂಬರಿಕಾರರು ಮಾಡದೇ ಇರುವ ವಾಸ್ತವಾಂಶವನ್ನು ಸಮಾಜದ ಮುಂದಿಟ್ಟಿದ್ದಾರೆ.

*****

# ಅನುಬಂಧ

## ೧. ಕಾದಂಬರಿಯ ಕನ್ನಡ ರೂಪ

"ನನ್ನ ಮಕ್ಕಳನ್ನು ರಣರಂಗಕ್ಕೆ ಕಳುಹಿಸಿ, ನನಗೆ ಮನೆಯಲ್ಲಿ ಕುಳಿತಿರಲು ಸಾಧ್ಯವೇ ಇಲ್ಲ. ಹೊರಡಿ, ನಾನು ಮಲರಾಯನ ಗುಂಡದ ದೀಪ ಹೊತ್ತಿಸಿ ಬರುತ್ತೇನೆ. ನಾನು ಬಂದು ತಲುಪುವವರೆಗೆ ಏನೂ ಮಾಡಬೇಡಿ. ನಾನು ಬಂದು ತಲುಪುವಾಗ ಚಂದ್ರ ಉದಯಿಸಿ ಬೆಳಕಾಗುತ್ತದೆ. ಅನಂತರ ಬೇಟೆ ಪ್ರಾರಂಭಿಸೋಣ."

ಯುವಕರು ಹೊರಟರು, ಯಮುನಕ್ಕ ಮಲರಾಯನಿಗೆ ದೀಪ ಬೆಳಗಿಸಿ, ಪೆಠಾರಿಯ ಬಾಗಿಲು ತೆಗೆದು ಚಾವಡಿ ಇಳಿಯುವಾಗ, ಕಂಪೆನಿ ಸರಕಾರ ಮಂಜಣಾಳ್ವರಿಗೆ ಬಹುಮಾನವಾಗಿ ಕೊಟ್ಟಿದ್ದ ಜೋಡು ನಳಿಗೆಯ ಕೋವೆ ಅವರ ಕೈಯಲ್ಲಿತ್ತು.

ದೆಯ್ಯುವನ್ನು ಕರೆದು, ನಾಲ್ಕು ಯುವಕರು ಮುಂಜಾನೆ ನಾಲ್ಕು ಜೋಡಿ ಕೋಣಗಳನ್ನು ಬಾರೆಬೈಲಿಗೆ ತರುವಂತೆ ವ್ಯವಸ್ಥೆ ಮಾಡಲು ಹೇಳಿದರು.

ಬಾರೆಬೈಲಿಗೆ ಬಂದು ತಲುಪುವಾಗ ಮಧ್ಯರಾತ್ರಿ ಕಳೆದು ಕೆಲವು ಘಳಿಗೆಯಾಗಿತ್ತು. ಮುಗೇರರ ಯುವಕರು ಕೆಲವರು ಅಂಗಳದ ಬದಿಗೆ ಬಂದು ಬೊಗಳುತ್ತಿದ್ದ ನಾಯಿಗಳನ್ನು ಮುಗಿಸಿದರು. ಕೆಲವರು ಮನೆಯ ಹಿಂದಿದ್ದ ದನ, ಕರುಗಳು ಹೋಗುವ ಓಣಿಯಲ್ಲಿ ಅವಿತುಕೊಂಡರು. ಕೆಲವರು ಸ್ನಾನದ ಕೊಟ್ಟಿಗೆ, ಹಟ್ಟಿಯ ಹಿಂದೆ ತಲುಪಿದಾಗ ಬಾರೆಬೈಲಿನ ಮನೆಯ ಒಳಗೆ ಮಲಗಿದ್ದವರು ಎದ್ದು ಚಾವಡಿಗೆ ಬಂದರು. ಅವರಲ್ಲಿ ಒಬ್ಬ ಅಂಗಳಕ್ಕೆ ಇಳಿಯುವಾಗ, ಹಟ್ಟಿಯಲ್ಲಿದ್ದ ದನಕರುಗಳು ಅಂಗಳಕ್ಕೆ ಬರುತ್ತಿರುವುದನ್ನು ಕಂಡು ಭಯಗೊಂಡನು. ತಿರುಗಿ ಒಳಗೆ ಓಡಿದ.

"ಅಣ್ಣಾ! ಬಂದಿದ್ದಾವೆ!! ಮಿತ್ತಬೈಲಿನ ನಾಯಿಗಳು ಬಂದಿದ್ದಾವೆ!!" ಎನ್ನುತ್ತಾ ಚಾವಡಿಗೆ ಹಾರುವಾಗ ಕೋವಿಯ ನಾಲ್ಕೈದು ಗುಂಡುಗಳು ಸಿಡಿದವು. ಚಾವಡಿಗೆ ಗುಂಡಿನ ಮಳೆಸುರಿಯಿತು. ಅದೇ ಹೊತ್ತಿಗೆ, ಹಟ್ಟಿಯ ಸೋಗೆಯ ಮಾಡಿಗೂ, ಸ್ನಾನದ ಕೊಟ್ಟಿಗೆಯ ಮುಳಿಹುಲ್ಲಿನ ಮಾಡಿಗೂ ಒಬ್ಬ ಬೆಂಕಿ ಹಚ್ಚಿದನು. ಮತ್ತೆ ಗುಂಡಿನ ಸುರಿಮಳೆಯಾಯಿತು. ಮನೆಯೊಳಗಿದ್ದವರೆಲ್ಲಾ ಹೆದರಿ ಅಂಗಳಕ್ಕೆ ಹಾರಿದರು.

ಗುಡ್ಡದ ಬದಿಯಿಂದ ಅಂಗಳಕ್ಕೆ ಹಾರಿದ ಮಿತ್ತಬೈಲಿನ ಯುವಕರು ಉರಿಯುವ ಪಂಜುಗಳನ್ನು ಮನೆಯ ಮಾಡಿಗೆ ಹಾಗೂ ಚಾವಡಿಯ ಒಳಗೆ ಎಸೆದರು. ಮನೆಯ ಮಾಡಿಗೆ ಬೆಂಕಿ ಹತ್ತಿಕೊಳ್ಳತೊಡಗಿತು.

ಅಂಗಳದಲ್ಲಿ ತಲವಾರು, ಗುದ್ದಲಿಗಳ ಕಾಳಗ ಆರಂಭವಾಯಿತು. ಯಮುನಕ್ಕನ ಗಮನ ಚಾವಡಿಯ ಮೇಲಿತ್ತು. ಅವರಿಗೆ ತ್ಯಾಂಪಣ್ಣ ಬೇಕಾಗಿತ್ತು. ಅವರು ಕಣ್ಣು ಮಿಟುಕಿಸುವುದಕ್ಕೆ ಮೊದಲೇ ಎಲ್ಲಿಂದಲೋ ಹಾರಿ ಬಂದ ಇಬ್ಬರು ಅವರ ಇದುರು ನಿಂತಿದ್ದರು. ಇದನ್ನು ಗಮನಿಸಿದ ದೆಯ್ಯು ಹಾಗೂ ಚೋಮ ಅವರಿಬ್ಬರ ತಲೆಗಳನ್ನು ಕಡಿದುರುಳಿಸಿದರು. ಅಂಗಳದ ಬದಿಯಿಂದಲೇ ಬಂದ ದುಗ್ಗಪ್ಪ, ಸೀಮೆಎಣ್ಣೆ ತುಂಬಿದ್ದ ಒಂದು ಡಬ್ಬವನ್ನು ಮನೆಯ ಒಳಗೆ ಎಸೆದು ಕೋವಿಯ ಗುಂಡಿನಿಂದ ಅದನ್ನು ಸಿಡಿಸಿದನು. ಕಿನ್ಯನ ಚಾವಡಿಯಿಂದಲೇ ಹರಡಿದ ಸೀಮೆ ಎಣ್ಣೆಗೆ ಬೆಂಕಿ ಹಚ್ಚಿದನು. ಇಡೀ ಚಾವಡಿಗೆ ಬೆಂಕಿ ಹತ್ತಿಕೊಂಡಾಗ, ಕಾಲ ಭೈರವನಂತೆ ತಲವಾರು ಹಿಡಿದಿದ್ದ ತ್ಯಾಂಪಣ್ಣ ಯಮುನಕ್ಕ ನಿಂತಿದ್ದಲ್ಲಿಗೆ ಓಡಿಬಂದನು. ಮನೆಯೊಳಗಿಂದಲೇ ಆತನ ಕಣ್ಣುಗಳು ಯಮುನಕ್ಕನನ್ನು ಹುಡುಕುತ್ತಿದ್ದವು. ತ್ಯಾಂಪಣ್ಣ ತಲವಾರು ಬೀಸಿದಾಗ ಯಮುನಕ್ಕ ಕೋವಿಯನ್ನು ಅಡ್ಡಹಿಡಿದರು. ತ್ಯಾಂಪಣ್ಣನ ಕೈಯಲ್ಲಿದ್ದ ತಲವಾರು ಹಾಗೂ ಯಮುನಕ್ಕನ ಕೋವಿ ಕೆಳಗೆ ಬಿದ್ದವು. ಕೈಹಿಡಿದು ಎಳೆಯಲು ಬಂದ ತ್ಯಾಂಪಣ್ಣನನ್ನು ಹಿಡಿದು, ತನ್ನ ಕಂಕುಳಲ್ಲಿ ಅವನ ಕುತ್ತಿಗೆಯನ್ನು ಅಮುಕಿ ಹಿಡಿದುಕೊಂಡರು ಯಮುನಕ್ಕ. ಅವನಿಗೆ ಉಸಿರಾಡಲೂ ಸಾಧ್ಯವಾಗದಂತೆ ಗಟ್ಟಿಯಾಗಿ ಹಿಡಿದುಕೊಂಡು ಒಂದು ಸುತ್ತು ತಿರುಗಿಸಿದಾಗ, ಗಾಯಗೊಂಡಿದ್ದ ದೆಯ್ಯು ಓಡಿಬಂದು ತನ್ನಲ್ಲಿದ್ದ ಭರ್ಜಿಯಿಂದ ತ್ಯಾಂಪಣ್ಣನ ಹೊಟ್ಟೆಗೆ ತಿವಿದನು. ತ್ಯಾಂಪಣ್ಣ ಯಮುನಕ್ಕನ ಕಂಕುಳಲ್ಲಿಯೇ ಪ್ರಾಣಬಿಟ್ಟನು.

## ೨. ಕಾದಂಬರಿಯ ಮೂಲ ತುಳು ರೂಪ

"ಎನ್ನ ಜೋಕ್ಲೆನ್ ಜೂವೊದ ಗೊಬ್ಬು ಗೊಬ್ಬೆರೆ ಕಡಪುಡ್ದು ಯಾನ್ ಇಲ್ಲಡ್ ಕುಲ್ಯೆರೆ ಸಾಧ್ಯನೇ ಇಜ್ಜಿ. ಪಿದಡಿ, ಯಾನ್ ಮಲರಾಯ ಗುಂಡೊದ ತುಡರ್ ಪೊತ್ತಾದ್ ಬರ್ಪೆ. ಯಾನ ಬತ್ತ್‌ದ್ ಎತ್ತ್‌ನೆಟ ಮನಿಪ್ಪಡೆ. ಯಾನ್ ಬತ್ತ್‌ತ್‌ನಗ ತಿಂಗೊಳ್ದ ಬೊಳ್ಪು ಉದಿಪ್ಪುಂಡು. ಅಯೆಡ್ದ್‌ಬುಕ್ಕ ಬೋಂಟೆ ದೇರ್‌ಗ."

ಜವಣೆರ್ ಪಿದಡ್ಯೆರ್. ಯಮುನಕ್ಕೆ ಮಲರಾಯಗ್ ತುಡರ್ ಪೊತ್ತಾದ್ ಕಲೆಂಬಿದ ಬಾಕ್ಲ್ ಗೆತ್ತ್‌ದ್ ಚಾವಡಿ ಜಪ್ಪುನಗ ಕಂಪೆನಿ ಸರಕಾರ ಮಂಜಣಾಳ್ವರೆಗ್ ಸೇಜಿ ಕೊರ್‌ತ್ನ ಡಬ್ಬಲ್ ತೋಟೆದ ಬೆಡಿ ಆರೆ ಕೈಟಿತ್ತ್‌ಂಡ್.

ದೆಯ್ಯುನು ಲೆತ್ತ್‌ದ್ ನಾಲ್ ಜವಣೆರ್ ಪುಲ್ಯಕಲೊಗು ನಾಲ್ ಜೋಡು ಎರ್ಲೆನ್ ಬಾರಬೈಲ್‌ಗ್ ದಪೊರೆ ಲೆತ್ತೊಂದು ಬರ್ಪುನ ತಯಾರ್ ಮನ್ಪಿಯರೆ ಪಂಡೆರ್.

ಬಾರೆಬೈಲ್‌ಗ್ ಬತ್ತ್‌ತ್‌ನಗ ನಡುರಾತ್ರೆ ಕರಿದ್ ಗಳಿಗೆ ರಡ್ಡಾತ್‌ಂಡ್. ಮುಗೆರೆರೆ ಜವಣೆರ್ ಕೆಲವೆರ್ ಜಾಲ್‌ದ ಬರಿಕೆತ್ತ್‌ದ್ ಕೊರೆಪುನ ನಾಯಿಲೆನ್ ಮುಗಿತ್ತೆರ್. ಕೆಲವೆರ್ ಇಲ್ಲ ಪಿರಾವುದ ಕೈಕಂಜಿ ಪೋಪಿ ಕಣಿಟ್ ಕಬ್ಬುದುಂತ್ಯೆರ್.

ಕೆಲವೆರ್ ಬೆಂದ್ರೊಟ್ಯ ಕಿದೆತ್ತ ಪಿರವು ಎತ್ತ್‌ನಗ ಬಾರೆಬೈಲ್‌ದ ಇಲ್ಲದ ಉಲಾಯಿಡ್ದ್ ಜನ ಲಕ್ಕ್‌ದ್ ಚಾವಡಿಗ್ ಬತ್ತೆರ್. ಅಕ್ಲೆನೆಟ್ ಒರಿ ಜಾಲ್ ಜಪ್ಪುನಗ ಕಿದೆಟ್ಟತ್ತಿ ಕೈಕಂಜಿಲು ಜಾಲ್‌ಗ್ ಬತ್ತ. ಪಿದಾಯಿ ಬತ್ತ್‌ನಾಯೆ ಉಲಾಯಿ ಬಲಿತ್ತೆ.

"ಅಣ್ಣಾ! ಬೈದೆರ್!! ಮಿತ್ತಬೈಲ್‌ದ ನಾಯಿಲು ಬೈದಾ!!" ಪಂಡೊಂದು ಚಾವಡಿಗ್ ಲಾಗಿನಗ ತೋಟೆದ ಬೆಡಿ ಪುಡಾಂಡ್. ಚಾವಡಿಗ್ ಗುಂಡುದ ಬರ್ಸ ಬೂರ್‌ಂಡ್. ಅವ್ವೇ ಪೊರ್ತುಗು ಕಿದೆತ್ತ ಸೋಗೆದ ಮಾಡ್‌ಗ್‌ಲಾ ಬೆಂದ್ರ್‌ಕೊಟ್ಯದ ಮುಳಿತ ಮಾಡ್‌ಗ್‌ಲಾ ಏರೋ ತೂಕೊರ್ಯೆರ್. ಉಲಾಯಿಡಿತ್ತಿನ ಬೆಡಿಲ ಪುಡಾಯರೆ ಸುರುವಾಂಡ್. ಬೆಡಿತ್ತ ಪಿರಾವುಡೆ ಇಲ್ಲದ ಉಲಾಯಿ ಉತ್ತ್‌ನಕ್ಲ್ ಜಾಲ್‌ಗ್ ಲಾಗ್ಯೆರ್. ಗುಡ್ಡೆ ಬರಿಟ್‌ದ್ ಜಾಲ್‌ಗ್ ಲಾಗಿನ ಮಿತ್ತಬೈಲ್‌ದ ಜವಣೆರ್ ದೊಂದಿಲೆನ್ ಇಲ್ಲದ ಮಾಡ್‌ಗ್ ಚಾವಡಿದ ಉಲಾಯಿಗ್ ದಕ್ಯೆರ್. ಇಲ್ಲ್‌ಗ್‌ಲಾ ತೂ ಪತ್ತ್‌ಂಡ್.

ಜಾಲ್‌ಡ್ ತಲ್ವಾರ್ ಪಿಕ್ಕಾಸ್‌ದ ಲಡಾಯಿ ಸುರುವಾಂಡ್. ಯಮುನಕ್ಕೆನ ನೋಟ ಚಾವಡಿಡೇ ಇತ್ತ್‌ಂಡ್. ಆರೆಗ್ ತ್ಯಾಂಪಣ್ಣೆನೇ ಬೋಡಿತ್ತ್‌ಂಡ್. ಆರ್ ಕಣ್ಣ್ ಮಿಸುಕುನೆಕ್ ದುಂಬೇ ರಡ್ಡ್ ಜವಣೆರ್ ಒಲ್ಪೊ ಆರೆ ಎದುರುಗು ಲಾಗಿದುಂತ್ಯೆರ್. ಕೈತಲಿತ್ತಿ ದೆಯ್ಯುಲ ಚೋಮೆಲ ರಡ್ಡೆತಲ ತರೆನ್ ಕಡ್ತ್ ಪಾಡ್ಯೆರ್. ಜಾಲ್‌ದ ಬರಿಡ್ದ್ ಬತ್ತಿ ದುಗ್ಗಪ್ಪೆ ಒಂಜಿ ಚಿಮಿಣೆದ ಎಣ್ಣೆದ ಡಬ್ಬೆನ್ ಇಲ್ಲದ್ ಔಲಾಯಿ

ದಕ್ಕ್‌ದ್ ತೋಟೆದ ಬೆಡಿಟ್ ಆಯೆನ್ ಪುಡತ್ತೆ. ಕಿನ್ಯನೆ ಚಾವಡಿಡ್ ರಟ್ಟ್‌ದಿತ್ತಿ ಚಿಮಿಣಿದೆಣ್ಣೆಗ್ ತೂ ಕೊರ್‍ಯೆ. ಇಡೀ ಚಾವಡಿ ಬಗ್ಗಂಡ್ ಪೊತ್ತ್‌ನಗ ಕಾಲಭೈರವಲೆಕ ತಲ್ವಾರ್ ಪತೊಂದು ತ್ಯಾಂಪಣ್ಣೆ ಯಮುನಕ್ಕ ಇತ್ತ್‌ನಾಡೆ ಬಲಿತೆ. ಉಲಾಯಿದ್ದೇ ಆಯೆಲ ಯಮುನಕ್ಕೆನ ನಾಡೊಂದೇ ಇತ್ತೆ. ತ್ಯಾಂಪಣ್ಣೆ ಬೀಜಿನ ತಲ್ವಾರ್‌ಗ್ ಯಮುನಕ್ಕೆ ಕೈಟಿತ್ತಿ ಬೆಡಿನ್ ಅಡ್ಡ ಪತ್ಯೆರ್. ತ್ಯಾಂಪಣ್ಣನ ಕೈಟಿತ್ತಿ ತಲ್ವಾರ್ ರಟ್ಟ್‌ಂಡ್. ಯಮುನಕ್ಕೆನ ಬೆಡಿ ಕೈಡ್ದ್ ಬೂರ್‌ಂಡ್. ಯಮುನಕ್ಕೆನ ಕೈಟ್ ಪತ್ತ್‌ದ್ ಒಯಿಪೆರೆ ಪಿದಾಡ್ನ ತ್ಯಾಂಪಣ್ಣನ್ ಅರಂಟ್ ಪತ್ತ್‌ದ್ ರಟ್ಟೆದಡಿಟ್ ಕಿದಿಕ್‌ಲ್‌ಡ್ ಆಯೆನ ಕಂಟೆಲ್ ಅಮತ್ತ್‌ದ್ ಪತೊಂಡೆರ್. ಕಿದ್ಕ್‌ಲ್‌ದಡಿಟ್ಟ್ ಪತ್ತ್‌ದ್ ಆಯನ್ ತಿರ್ಗಾನಗ ಅರೆಪೆಟ್ಟಾಯಿನ ದೆಯ್ಯು ಪಾರೊಂದು ಬತ್ತ್‌ದ್ ಒಂಜಿ ಬರ್ಚಿನ್ ದೆತ್ತ್‌ದ್ ತ್ಯಾಂಪಣ್ಣನ ಬಂಜಿಗ್ ಕುತ್ಯೆ. ತ್ಯಾಂಪಣ್ಣೆ ಯಮುನಕ್ಕೆನ ಕಿದ್ಕಿಲ್‌ದಡಿಟ್ಟೇ ಜೂವ ಬುಡ್ಯೆ.

*****

# ಪರಾಮರ್ಶನ ಗ್ರಂಥಗಳು

೧. ಆನಂದಕೃಷ್ಣ, 'ಮಿತ್ತಬೈಲ್ ಯಮುನಕ್ಕೆ', ೨೦೦೫, ಹೇಮಾಂಶು ಪ್ರಕಾಶನ, ದೇರೆಬೈಲ್, ಮಂಗಳೂರು.

೨. ಇಂದಿರಾ ಹೆಗ್ಡೆ, 'ಬಂಟರು ಒಂದು ಸಮಾಜೊ-ಸಾಂಸ್ಕೃತಿಕ ಅಧ್ಯಯನ', ೨೦೦೯, ಬೆಂಗಳೂರು

೩. ಗಣಪತಿ ರಾವ್ ಐಗಳ್, ಎಂ. 'ದಕ್ಷಿಣಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ', ೧೯೨೮, ಶಾರದಾ ಪ್ರೆಸ್, ಮಂಗಳೂರು.

೪. ಗುರುರಾಜ ಭಟ್, ಪಿ., 'ತುಳುನಾಡು', ೨೦೦೯, ಉಡುಪಿ.

೫. ಚಂದ್ರಶೇಖರ ಎನ್., 'ಭೂತಾಳಪಾಂಡ್ಯನ ಅಳಿಯಸಂತಾನ ಕಟ್ಟು', ೨೦೦೮, ಮಂಗಳೂರು.

೬. ಮಹಮ್ಮದ್ ಕುಳಾಯಿ, 'ಮಿತ್ತಬೈಲ್ ಯಮುನಕ್ಕ', ೨೦೧೦, ತುಳುನಾಡು ಪಬ್ಲಿಕೇಷನ್ಸ್, ಮಂಗಳೂರು.

೭. ರಮೇಶ್ ಕೆ.ವಿ., 'ತುಳುನಾಡಿನ ಇತಿಹಾಸ', ೧೯೯೬, ಗೋವಿಂದ ಪೈ ಸಂಶೋಧನಾ ಕೇಂದ್ರ, ಉಡುಪಿ.

೮. ವಿವೇಕ ರೈ, ಬಿ.ಎ., 'ತುಳುಜನಪದ ಸಾಹಿತ್ಯ', ೧೯೮೫, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೯. ವಿವೇಕ ರೈ, ಬಿ.ಎ., ತೌಳವ ಸಂಸ್ಕೃತಿ, ೧೯೭೭, ಸಹ್ಯಾದ್ರಿ ಪ್ರಕಾಶನ, ಮೈಸೂರು.

೧೦. ಸಚ್ಚಿದಾನಂದ ಹೆಗ್ಡೆ ಬಿ., 'ತುಳುನಾಡವರ ಸಮಾಜ' ೨೦೧೦, ಕೌಸ್ತುಭ ಪ್ರಕಾಶನ, ಬೆಂಗಳೂರು.

## ಬಿಡಿ ಲೇಖನಗಳು

೧. ಉದಯವಾಣಿ, ಮಾರ್ಚ್ ೧೩, ೨೦೧೧

೨. ಕನ್ನಡಪ್ರಭ, ಜನವರಿ ೨೩, ೨೦೧೧

೩. ಹಾಯ್ ಬೆಂಗಳೂರು, ಫೆಬ್ರವರಿ ೨, ೨೦೧೧.

